# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೫೦<br>**Volume 150** | ಬೆಂಗಳೂರು, ಗುರುವಾರ, ಮಾರ್ಚ್ ೧೨, ೨೦೧೫ (ಫಾಲ್ಗುಣ ೨೧, ಶಕ ವರ್ಷ ೧೯೩೬)<br>**Bengaluru, Thursday, March 12 , 2015 (Phalguna 21, Shaka Varsha 1936)** | ಸಂಚಿಕೆ ೧೧<br>**Issue 11** |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಂಸದೀಯ ವ್ಯವಹಾರಗಳ ಸಚಿವಾಲಯ

**ವಿಷಯ :** ರಾಜ್ಯ ಸರ್ಕಾರವು ಸಂಸದೀಯ ವ್ಯವಹಾರಗಳ ಇಲಾಖೆಯ ಅಡಿಯಲ್ಲಿ ವಿಧಾನಮಂಡಲದಲ್ಲಿ ಮಂಡಿತವಾಗುವ ಮುನ್ನ ಹೊಸ ಶಾಸನಗಳ ಪರಿಶೀಲನೆಗಾಗಿ ಸಮಾಲೋಚನಾ ಸಮಿತಿಯನ್ನು ರಚಿಸಿಕೊಳ್ಳುವ ಬಗ್ಗೆ

**ಸರ್ಕಾರದ ಆದೇಶ ಸಂಖ್ಯೆ: ಸಂವ್ಯಶಾಇ 190 ಆಡಳಿತ 2014, ಬೆಂಗಳೂರು, ದಿನಾಂಕ: 3ನೇ ಜನವರಿ, 2015**

ಕೇಂದ್ರ ಸರ್ಕಾರದಲ್ಲಿರುವ ಸಂಸದೀಯ ವ್ಯವಹಾರಗಳ ಇಲಾಖೆಯ ಅಡಿಯಲ್ಲಿ ರಚಿತವಾಗಿರುವ, ಸಲಹೆ ನೀಡುವ ಸಂಸದೀಯ "ಸಮಾಲೋಚನಾ ಸಮಿತಿ"ಯ ಮಾದರಿಯಲ್ಲಿಯೇ, ಕರ್ನಾಟಕ ಸರ್ಕಾರವು ಸಂಸದೀಯ ವ್ಯವಹಾರಗಳ ಇಲಾಖೆಯ ಅಡಿಯಲ್ಲಿ ಈ ಕೆಳಕಂಡ ಉದ್ದೇಶಗಳು ಮತ್ತು ಲಕ್ಷಣಗಳನ್ನು ಒಳಗೊಂಡಿರುವ ಉಭಯ ಸದನದ ಸದಸ್ಯರನ್ನು ಒಳಗೊಂಡ ಪರಿಣಿತರ "ಸಮಾಲೋಚನಾ ಸಮಿತಿ"ಯನ್ನು ರಚಿಸಲಾಗಿದೆ.

**ಅ. ಸಮಾಲೋಚನಾ ಸಮಿತಿಯ ಉದ್ದೇಶಗಳು, ಎಂದರೆ,-**

1) ಉಭಯ ಸದನದ ಸದಸ್ಯರಲ್ಲಿ ಇಲಾಖೆಯ ನೀತಿ ಹಾಗೂ ಉದ್ದೇಶಗಳ ಕುರಿತು ಶಾಸನಗಳ ಬಗ್ಗೆ ಅರಿವು ಮೂಡಿಸುವುದು ;

2) ಸರ್ಕಾರಕ್ಕೂ ಮತ್ತು ಉಭಯ ಸದನದ ಸದಸ್ಯರುಗಳೊಂದಿಗೆ ಉತ್ತಮ ಬಾಂಧವ್ಯವನ್ನು ಮೂಡಿಸುವುದು ;

3) ಸರ್ಕಾರದ ನೀತಿಯನ್ನು ವಿಧೇಯಕಗಳ ಮೂಲಕ ರಚಿಸುವ ಪೂರ್ವದಲ್ಲಿ ವಿಧಾನಮಂಡಲದ ವಿವಿಧ ಪಕ್ಷಗಳ ನಾಯಕರುಗಳ ಅಥವಾ ಸದಸ್ಯರ ಅಭಿಪ್ರಾಯಗಳನ್ನು ಪಡೆದು, ಅಂತಿಮವಾಗಿ ಸರ್ಕಾರದ ನೀತಿಯನ್ನು ಶಾಸನಗಳ ಮೂಲಕ ಅಳವಡಿಸಿಕೊಂಡು ರಚಿಸುವುದು ;

4) ಸಂಸದೀಯ ವ್ಯವಹಾರಗಳ ಇಲಾಖೆಯ ಅಡಿಯಲ್ಲಿ ಎಲ್ಲಾ ಇಲಾಖೆಗಳ ಶಾಸನವನ್ನು ರಚಿಸುವ ಕಾರ್ಯಕೈಗೊಳ್ಳುವುದರಿಂದ, ಯಾವುದೇ ಹೊಸ ಶಾಸನವನ್ನು ರಚಿಸುವ ಮುನ್ನ ಎಲ್ಲಾ ಪಕ್ಷಗಳ ಪ್ರತಿನಿಧಿಗಳ ಅಭಿಪ್ರಾಯವನ್ನು ಪಡೆದು, ಅಂತಿಮ ನೀತಿ-ನಿರ್ಣಯವನ್ನು ಕೈಗೊಳ್ಳುವುದು.

**ಆ. ಸಮಾಲೋಚನಾ ಸಮಿತಿಯ ಲಕ್ಷಣಗಳು.-**

1) ಸಮಾಲೋಚನಾ ಸಮಿತಿಯು ಸಂಸದೀಯ ವ್ಯವಹಾರಗಳ ಇಲಾಖೆಯ ಅಡಿಯಲ್ಲಿ ರಚಿಸಲ್ಪಡುತ್ತದೆ ;

2) ಸದರಿ ಸಮಿತಿಯಲ್ಲಿ ಕನಿಷ್ಠ 10 ಜನ ಸದಸ್ಯರು ಹಾಗೂ ಗರಿಷ್ಠ 30 ಜನ ಸದಸ್ಯರುಗಳು ಇರುತ್ತಾರೆ ;

3) ಆಡಳಿತ ಪಕ್ಷಗಳನ್ನು ಪ್ರತಿನಿಧಿಸುವ ಸದಸ್ಯರನ್ನು ಒಳಗೊಂಡಂತೆ ಎಲ್ಲಾ ವಿರೋಧ ಪಕ್ಷಗಳನ್ನು ಪ್ರತಿನಿಧಿಸುವ ಸದಸ್ಯರು ಸಮಾಲೋಚನಾ ಸಮಿತಿಯ ಸದಸ್ಯರಾಗಿ, ಸದರಿ ಸಭೆಯಲ್ಲಿ ಭಾಗವಹಿಸಲು ಅವಕಾಶ ನೀಡಲಾಗುತ್ತದೆ. ಸ್ವ-ಇಚ್ಛೆ ಮೇರೆಗೆ ಈ ಸದಸ್ಯತ್ವವನ್ನು ನೀಡಲಾಗುತ್ತದೆ ;

4) ಸಮಾಲೋಚನಾ ಸಮಿತಿಯು ಸ್ವ-ಇಚ್ಛೆ ಮೇರೆಗೆ ಸದಸ್ಯತ್ವವನ್ನು ಹೊಂದಿರುವ ಸದಸ್ಯರನ್ನು ಒಳಗೊಳ್ಳುವುದರಿಂದ, ಸದರಿ ಸಭೆಗೆ ಹಾಜರಾಗುವ ಸದಸ್ಯರಿಗೆ T.A./D.A. ನೀಡುವ ಪದ್ಧತಿ ಇರುವುದಿಲ್ಲ.

5) ಖಾಯಂ ಸದಸ್ಯರಿಗೆ ಅಧಿವೇಶನ ನಡೆಯದ ಸಮಯದಲ್ಲಿ T.A./D.A. ನೀಡಲಾಗುವುದು.

6) ಸದರಿ ಸಮಿತಿಯನ್ನು ಸಂಸದೀಯ ವ್ಯವಹಾರಗಳ ಸಚಿವರು ಅಧ್ಯಕ್ಷತೆ ವಹಿಸಿ, ಯಾವ ಇಲಾಖೆಯ ಶಾಸನವನ್ನು ಪರಿಗಣಿಸಲಾಗುವುದು, ಆ ಇಲಾಖೆಯ ಸಚಿವರು ಸಹ ಸಭೆಯ ಸಹ–ಅಧ್ಯಕ್ಷತೆಯನ್ನು ವಹಿಸಬಹುದಾಗಿರುತ್ತದೆ ;

7) ಸಮಾಲೋಚನಾ ಸಮಿತಿಯ ಸದಸ್ಯತ್ವದ ಅವಧಿಯು ವಿಧಾನಸಭೆಯ ಸದಸ್ಯತ್ವದ ಅವಧಿಯೊಂದಿಗೆ co-terminus ಹೊಂದಿರುತ್ತದೆ ;

8) ಸಮಾಲೋಚನಾ ಸಮಿತಿಯ ಸದಸ್ಯರು ತಮ್ಮ ಅಭಿಪ್ರಾಯವನ್ನು ಮುಕ್ತವಾಗಿ ತಿಳಿಸಬಹುದಾಗಿರುತ್ತದೆ ಹಾಗೂ ಚರ್ಚಿಸಬಹುದಾಗಿರುತ್ತದೆ. ಆದರೆ, ಇಲ್ಲಿ ಹೇಳಲಾದ ವಿಷಯಗಳನ್ನು ಸದನದ ಮುಂದೆ ಹೇಳುವ ಅವಶ್ಯಕತೆ ಇರುವುದಿಲ್ಲ ;

9) ಈ ಸಮಿತಿಯು ಯಾವುದೇ ಕಡತಗಳನ್ನು summon ಮಾಡುವ ಅಥವಾ ಯಾವುದೇ ಸಾಕ್ಷಿದಾರರನ್ನು ಕರೆಸುವ ಅಧಿಕಾರವನ್ನು ಹೊಂದಿರುವುದಿಲ್ಲ ;

10) ಸದರಿ ಸಮಿತಿಯು ಒಂದು ವರ್ಷದಲ್ಲಿ 4 ರಿಂದ 6 ಬಾರಿ ಸಭೆಗಳನ್ನು ನಡೆಸಬಹುದಾಗಿರುತ್ತದೆ ;

11) ಸದರಿ ಸಮಿತಿಯು ಒಂದು ವರ್ಷದಲ್ಲಿ ಒಂದು ಬಾರಿ ಬೆಂಗಳೂರಿನಿಂದ ಹೊರಗಡೆ ಸಭೆಯನ್ನು ನಡೆಸಬಹುದಾಗಿರುತ್ತದೆ ;

12) ಸಂಸದೀಯ ವ್ಯವಹಾರಗಳ ಇಲಾಖೆಯು ನಾಲ್ಕು ವಾರ ಮುಂಚೆ ಸಭೆಯನ್ನು ಸೇರುವ ಬಗ್ಗೆ ನೋಟೀಸನ್ನು ಸದಸ್ಯರಿಗೆ ಕಳುಹಿಸಬೇಕಾಗುತ್ತದೆ ; ಕನಿಷ್ಠ ಪಕ್ಷ 10 ದಿನಗಳ ಮುಂಚಿತವಾಗಿ ಹಾಗೂ ಅಧಿವೇಶನ ಇಲ್ಲದ ಅವಧಿಯಲ್ಲಿ 2 ವಾರಗಳ ಮುಂಚಿತವಾಗಿ ನೋಟೀಸನ್ನು ನೀಡಲಾಗುತ್ತದೆ ;

13) ಪ್ರತಿ ಸದಸ್ಯರು ತಮ್ಮ ನಿವಾಸದ ವಿಳಾಸ, ಇ–ಮೇಲ್ ವಿಳಾಸ, ದೂರವಾಣಿ ಸಂಖ್ಯೆ, ಮೊಬೈಲ್ ಸಂಖ್ಯೆ ಮುಂತಾದವುಗಳ ವಿವರಗಳನ್ನು ನೀಡಬೇಕಾಗುತ್ತದೆ ;

14) ಈ ಸಮಿತಿಯ ಸಭೆಗೆ ಕೋರಂ ಇರುವುದಿಲ್ಲ ;

15) ಈ ಸಮಿತಿಯಲ್ಲಿ ನಿರ್ಣಯಿಸಿದ ವಿಚಾರಗಳನ್ನು ಸರ್ಕಾರಕ್ಕೆ ಕಳುಹಿಸಿಕೊಡಬೇಕಾಗುತ್ತದೆ ಹಾಗೂ ಇದರಲ್ಲಿ ಒಪ್ಪಬಹುದಾದ ಶಿಫಾರಸ್ಸುಗಳನ್ನು ಸರ್ಕಾರ ಒಪ್ಪಿಕೊಳ್ಳಬಹುದಾಗಿರುತ್ತದೆ ;

16) ಈ ಸಮಿತಿಯು ಯಾವುದೇ ಉಪ ಸಮಿತಿಗಳನ್ನು ರಚಿಸುವ ಅಧಿಕಾರವನ್ನು ಹೊಂದಿರುವುದಿಲ್ಲ ;

17) ಇದಕ್ಕೆ ತಗಲುವ T.A./D.A. ಅಥವಾ ಸಭೆಯ ಉಪಹಾರ ವೆಚ್ಚಗಳನ್ನು ಸಿ.ಆ.ಸು. ಇಲಾಖೆಯ "2052–00–090–0–01–051 ಸಾಮಾನ್ಯ ವೆಚ್ಚಗಳು (ಯೋಜನೇತರ)" ಎಂಬ ಲೆಕ್ಕಶೀರ್ಷಿಕೆಯಡಿಯಲ್ಲಿ ಭರಿಸಲಾಗುವುದು.

2. ಆರ್ಥಿಕ ಇಲಾಖೆಯು 2014–15ನೇ ಸಾಲಿನಲ್ಲಿ ಈ ಸಮಾಲೋಚನೆಯ ಸಭೆಯ ವೆಚ್ಚಕ್ಕೆ ಅಗತ್ಯವಿರುವ ರೂ. 2,00,000/– ಮೊತ್ತವನ್ನು ಲೆಕ್ಕ ಶೀರ್ಷಿಕೆ "2052–00–090–0–01–051 ಸಾಮಾನ್ಯ ವೆಚ್ಚಗಳು (ಯೋಜನೇತರ)" ಅಡಿಯಲ್ಲಿ ಭರಿಸಲು ಆರ್ಥಿಕ ಇಲಾಖೆಯು ತನ್ನ ಹಿಂಬರಹ ಸಂಖ್ಯೆ: ಆಇ 256 ವೆಚ್ಚ 10, ದಿನಾಂಕ: 17–10–2014ರಲ್ಲಿ ಸಹಮತಿ ನೀಡಿರುತ್ತದೆ. ಆದುದರಿಂದ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಬಿ. ಗುಂಜಿಗಾವಿ**

ಸರ್ಕಾರದ ಕಾರ್ಯದರ್ಶಿ,

ಸಂಸದೀಯ ವ್ಯವಹಾರಗಳ ಇಲಾಖೆ

**P.R. 93**

**SC - 500**

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಐ 157 ಎಸ್‌ಜಿಎಫ್ 2011, ಬೆಂಗಳೂರು, ದಿನಾಂಕ: 23ನೇ ಡಿಸೆಂಬರ್, 2014**

'ಮೆ॥ ಭಾಲ್ಕೇಶ್ವರ ಶುಗರ್ಸ್ ಲಿಮಿಟೆಡ್' ಎಂಬ ಹೆಸರಿನಲ್ಲಿ ಸಕ್ಕರೆ ಕಾರ್ಖಾನೆಯು ಭಾರತೀಯ ಕಂಪನಿಗಳ ಅಧಿನಿಯಮ, 1956ರ ಅಡಿ ಸ್ಥಾಪಿತವಾಗಿದೆ. ಈ ಕಾರ್ಖಾನೆಗೆ ಭಾರತ ಸರ್ಕಾರದ ವಾಣಿಜ್ಯ ಮತ್ತು ಕೈಗಾರಿಕಾ ಮಂತ್ರಾಲಯದ ಆದೇಶ ಸಂಖ್ಯೆ: 2652/ಎಸ್‌ಐಎ/ಐಎಂಓ/2010, ದಿನಾಂಕ: 09–11–2011ರಲ್ಲಿ ಅಂಗೀಕಾರ ನೀಡಲಾಗಿದೆ.

2. 'ಮೆ॥ ಭಾಲ್ಕೇಶ್ವರ ಶುಗರ್ಸ್ ಮಿಲ್ಸ್ ಲಿಮಿಟೆಡ್' ಸಕ್ಕರೆ ಕಾರ್ಖಾನೆಯು ಸರ್ಕಾರಕ್ಕೆ ಮನವಿ ಸಲ್ಲಿಸಿ ಸದರಿ ಕಾರ್ಖಾನೆಗೆ ಕಬ್ಬು ಮೀಸಲು ಕ್ಷೇತ್ರ ನಿಗಧಿಪಡಿಸುವಂತೆ ಕೋರಿರುತ್ತದೆ. ಈ ಸಂಬಂಧ ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ: 11–08–2014ರ ಪ್ರಸ್ತಾವನೆಯಲ್ಲಿ ಬೀದರ ಜಿಲ್ಲೆಯಲ್ಲಿನ ಭಾಲ್ಕಿ ತಾಲ್ಲೂಕಿನ 12 ಗ್ರಾಮಗಳನ್ನು ಕಬ್ಬು ಮೀಸಲು ಕ್ಷೇತ್ರವನ್ನಾಗಿ 'ಮೆ॥ ಭಾಲ್ಕೇಶ್ವರ ಶುಗರ್ಸ್ ಮಿಲ್ಸ್ ಲಿಮಿಟೆಡ್' ಸಕ್ಕರೆ ಕಾರ್ಖಾನೆಗೆ ಹಂಚಿಕೆ ಮಾಡಲು ಶಿಫಾರಸ್ಸು ಮಾಡಿರುತ್ತಾರೆ. ಈ 12 ಗ್ರಾಮಗಳ ಪೈಕಿ 7 ಗ್ರಾಮಗಳು ಪ್ರಸ್ತುತ ಬೀದರ್ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಬೀದರ್ ಜಿಲ್ಲೆ ಮತ್ತು 5 ಗ್ರಾಮಗಳು ಪ್ರಸ್ತುತ ಮಹಾತ್ಮಗಾಂಧಿ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಬೀದರ್ ಜಿಲ್ಲೆ ಇವರಿಗೆ ಹಂಚಿಕೆ ಮಾಡಿರುವ ಕಬ್ಬು ಮೀಸಲು ಕ್ಷೇತ್ರವಾಗಿರುತ್ತದೆ.

3. ರಾಜ್ಯದಲ್ಲಿ ಹೊಸ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಮತ್ತು ಹಾಲಿ ಕಾರ್ಯನಿರ್ವಹಿಸುತ್ತಿರುವ ಕಾರ್ಖಾನೆಗಳ ಸಾಮರ್ಥ್ಯ ವಿಸ್ತರಿಸುವ ಬಗ್ಗೆ ರಾಜ್ಯ ಸರ್ಕಾರದ ನೀತಿಯನ್ನು ಸರ್ಕಾರದ ಆದೇಶ ಸಂಖ್ಯೆ: ಸಿಐ 187 ಎಸ್‌ಜಿಎಫ್ 2007, ದಿನಾಂಕ: 11–09–2007ರಲ್ಲಿ ಪ್ರಕಟಿಸಲಾಗಿದೆ. ಅದರಂತೆ ಹೊಸ ಸಕ್ಕರೆ ಕಾರ್ಖಾನೆಗಳಿಗ ಕಬ್ಬಿನ ಮೀಸಲು ಕ್ಷೇತ್ರವನ್ನು 15 ಕಿ.ಮೀ. ಅಂತರದೊಳಗೆ ಹಂಚಿಕೆ ಮಾಡತಕ್ಕದ್ದು. ಒಂದು ವೇಳೆ 15 ಕಿ.ಮೀ. ಅಂತರದೊಳಗೆ ಸಾಕಷ್ಟು ಕಬ್ಬು ದೊರೆಯದಿದ್ದಲ್ಲಿ 15 ಕಿ.ಮೀ. ಹೊರಗಿನ ಕಬ್ಬಿನ ಮೀಸಲು ಕ್ಷೇತ್ರವನ್ನು ಹಂಚಿಕೆ ಮಾಡಬಹುದು. ಆದರೆ. ಈ ರೀತಿ ಹಂಚಿಕೆ ಮಾಡಲಾದ ಪ್ರದೇಶವು ಹಾಲಿ ಇರುವ ಬೇರೆ ಸಕ್ಕರೆ ಕಾರ್ಖಾನೆಗಳ 15 ಕಿ.ಮೀ. ವ್ಯಾಪ್ತಿಯ ಹೊರಗಡೆ ಇರತಕ್ಕದ್ದು ಎಂದು ನಿಗದಿ ಪಡಿಸಿದೆ.

4. ಭಾರತ ಸರ್ಕಾರವು ಹೊರಡಿಸಿರುವ 'ಕಬ್ಬು (ನಿಯಂತ್ರಣ) ಆದೇಶ, 1966' ರ ಕಂಡಿಕೆ 6ರಲ್ಲಿ ಕಬ್ಬು ವಿತರಣೆ ಮತ್ತು ಸಾಗಾಟವನ್ನು ಕೇಂದ್ರ ಸರ್ಕಾರಕ್ಕೆ ಅಧಿಕಾರ ನೀಡಲಾಗಿತ್ತು. ಕೇಂದ್ರ ಸರ್ಕಾರವು ರಾಜ್ಯ ಸರ್ಕಾರಕ್ಕೆ ಮರು ಹಂಚಿಕೆ ಮಾಡಿರುತ್ತದೆ. ಅದರಂತೆ ಬೀದರ್ ಜಿಲ್ಲೆಯ ಭಾಲ್ಕಿ ತಾಲ್ಲೂಕಿನ ಈ ಕೆಳಕಂಡ 12 ಗ್ರಾಮಗಳನ್ನು ಸ್ಥಳೀಯ ಸಕ್ಕರೆ ಕಾರ್ಖಾನೆಗೆ ಕಬ್ಬು ಸರಬರಾಜು ಮಾಡುವ ಸಲುವಾಗಿ 'ಮೆ॥ ಭಾಲ್ಕೇಶ್ವರ ಶುಗರ್ಸ್ ಲಿಮಿಟೆಡ್' ಬಾಜೋಳಗಾ ಗ್ರಾಮ, ಭಾಲ್ಕಿ ತಾಲ್ಲೂಕು, ಬೀದರ್ ಜಿಲ್ಲೆ ಈ ಕಾರ್ಖಾನೆಗೆ ಕಬ್ಬು ಮೀಸಲು ಕ್ಷೇತ್ರಗಳನ್ನಾಗಿ ಹಂಚಿಕೆ ಮಾಡಿದೆ.

| ಕ್ರ.ಸಂ. | ಗ್ರಾಮಗಳ ಹೆಸರು | ಅಂತರ (ಕಿ.ಮೀ.) |
|---|---|---|
| 1. | ಬಾಜೋಳಗಾ | 1 |
| 2. | ದಾಡಗಿ | 3 |
| 3. | ಹರನಾಳ | 7 |
| 4. | ಕುರುಬಖೇಳಗಿ | 5 |
| 5. | ಮಾವಿನಹಳ್ಳಿ | 3 |
| 6. | ನವಡಗಿ | 3 |
| 7. | ಗುಬ್ಬ್ಯಾಳ | 7 |
| 8. | ಎಕಲಾಸಪೂರ ವಾಡಿ | 6 |
| 9. | ಕಪಲಾಪೂರ | 3 |
| 10. | ಕೊರೂರು | 7 |
| 11. | ಮದಕಟ್ಟಿ | 4 |
| 12. | ಉಚ್ಚಾ | 6 |

4. ಮೇಲ್ಕಂಡ ಪಟ್ಟಿಯಲ್ಲಿರುವ ಕ್ರಮ ಸಂಖ್ಯೆ: 1 ರಿಂದ 7 ರವರೆಗಿನ ಭಾಜೋಳಗಾ, ದಾಡಗಿ, ಹರನಾಳ, ಕುರುಬಖೇಳಗಿ, ಮಾವಿನಹಳ್ಳಿ, ನವಡಗಿ ಮತ್ತು ಗುಬ್ಬ್ಯಾಳ, ಒಟ್ಟು 7 ಗ್ರಾಮಗಳನ್ನು ಬೀದರ್ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಬೀದರ್ ಜಿಲ್ಲೆ ಈ ಕಾರ್ಖಾನೆಗೆ ಕಬ್ಬು ಮೀಸಲು ಕ್ಷೇತ್ರವನ್ನಾಗಿ ಈ ಹಿಂದೆ ಹಂಚಿಕೆ ಮಾಡಿದ್ದನ್ನು ಹಿಂದಕ್ಕೆ ಪಡೆಯಲಾಗಿದೆ.

5. ಮೇಲ್ಕಂಡ ಪಟ್ಟಿಯಲ್ಲಿನ ಕ್ರಮ ಸಂಖ್ಯೆ 8 ರಿಂದ 12 ರವರೆಗಿನ ಎಕಲಾಸಪೂರ ವಾಡಿ, ಕಪಲಾಪೂರ, ಕೋರೂರು, ಮದಕಟ್ಟಿ ಮತ್ತು ಉಚ್ಚಾ, ಒಟ್ಟು 5 ಗ್ರಾಮಗಳನ್ನು ಮಹಾತ್ಮಗಾಂಧಿ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಬೀದರ್ ಜಿಲ್ಲೆ, ಈ ಕಾರ್ಖಾನೆಗೆ ಕಬ್ಬು ಮೀಸಲು ಕ್ಷೇತ್ರವನ್ನಾಗಿ ಈ ಹಿಂದೆ ಹಂಚಿಕೆ ಮಾಡಿದ್ದನ್ನು ಹಿಂದಕ್ಕೆ ಪಡೆಯಲಾಗಿದೆ.

6. ಮೇಲ್ಕಂಡ ಕಬ್ಬು ಮೀಸಲು ಕ್ಷೇತ್ರ ಹಂಚಿಕೆಯು ಈ ಕೆಳಕಂಡ ಷರತ್ತಿಗೊಳಪಟ್ಟಿರುತ್ತದೆ.

1) ಈ ಹಂಚಿಕೆಯು ಕೇಂದ್ರ ಸರ್ಕಾರ/ರಾಜ್ಯ ಸರ್ಕಾರ ಕಾಲ ಕಾಲಕ್ಕೆ ಹೊರಡಿಸುವ ಅಧಿನಿಯಮ/ನಿಯಮಗಳು/ಸೂಚನೆಗಳಿಗೆ ಒಳಪಟ್ಟಿರುತ್ತದೆ.

2) 'ಮೆ॥ ಭಾಲ್ಕೇಶ್ವರ ಶುಗರ್ಸ್ ಲಿಮಿಟೆಡ್' ಕಾರ್ಖಾನೆಯು ಕಾರ್ಖಾನೆ ನಡೆಸಲು ಅಗತ್ಯವಿರುವ ಭಾರತ ಸರ್ಕಾರ/ಸಕ್ಷಮ ಪ್ರಾಧಿಕಾರವು ನೀಡುವ ಚಾಲ್ತಿಯಲ್ಲಿರುವ ಕೈಗಾರಿಕಾ ಲೈಸೆನ್ಸ್‌ನ್ನು ಹೊಂದಿರತಕ್ಕದ್ದು.

3) ಕಬ್ಬು ಮೀಸಲು ಕ್ಷೇತ್ರಗಳನ್ನು ಹಂಚಿಕೆ ಪಡೆದ ಕಾರ್ಖಾನೆಯು ಮೇಲೆ ನಿಗದಿಪಡಿಸಿರುವ ಪ್ರದೇಶದಿಂದಲೇ ಕಬ್ಬನ್ನು ಪಡೆಯತಕ್ಕದ್ದು. ಹೊಸ ಕಾರ್ಖಾನೆಗಳು ಸ್ಥಾಪನೆಯಾಗುವವರೆಗೂ ರೈತರ ಹಿತದೃಷ್ಟಿಯಿಂದ ಸಂಬಂಧಪಟ್ಟ ಕಾರ್ಖಾನೆಗಳಿಗೆ ಕಬ್ಬು ಸರಬರಾಜು ಮಾಡುವವರೆಗೆ ಈ ಕಬ್ಬು ಮೀಸಲು ಕ್ಷೇತ್ರ ತಾತ್ಕಾಲಿಕವಾಗಿರುತ್ತದೆ.

4) 'ಮೆ॥ ಭಾಲ್ಕೇಶ್ವರ ಶುಗರ್ಸ್ ಲಿಮಿಟೆಡ್' ಕಾರ್ಖಾನೆಯು ಕಬ್ಬು ನುರಿಸುವ ಸಾಮರ್ಥ್ಯವು 2500 ಟಿಸಿಡಿಯು ಇದ್ದು, ಸದರಿ ಕಾರ್ಖಾನೆಗೆ ವಾರ್ಷಿಕವಾಗಿ ಲಭ್ಯವಾಗುವ ಕಬ್ಬಿನ ಪ್ರಮಾಣವು 2.22 ಲಕ್ಷ ಮೆ.ಟನ್ ಇರುತ್ತದೆ. ಈ ಕಾರ್ಖಾನೆಯು ಹಂಚಿಕೆಯಾದ ಪ್ರದೇಶಗಳಿಂದ ಹೊಸ ಕಾರ್ಖಾನೆಗಳು ಸ್ಥಾಪನೆಯಾಗುವವರೆಗೆ ತಾತ್ಕಾಲಿಕವಾಗಿ ಕಬ್ಬನ್ನು ರೈತರಿಂದ ಖರೀದಿಸಬಹುದಾಗಿದೆ.

5) ಕಬ್ಬು ಮೀಸಲು ಪ್ರದೇಶದ ಪ್ರತಿ ಕಬ್ಬು ಬೆಳೆಗಾರ ತಾನು ಬೆಳೆದ ಕಬ್ಬಿನ ಶೇ. 95 ರಷ್ಟನ್ನು ಮೇಲ್ಕಂಡ ಕಾರ್ಖಾನೆಗೆ ನೇರವಾಗಿ ಅಥವಾ ಕಬ್ಬು ಬೆಳೆಗಾರರ ಸಹಕಾರಿ ಸಂಘದ ಮೂಲಕ ಸರಬರಾಜು ಮಾಡುವುದು.

6) ಕಬ್ಬು ಮೀಸಲು ಪ್ರದೇಶದಲ್ಲಿನ ಪ್ರತಿ ಕಬ್ಬು ಬೆಳೆಗಾರ ಅಥವಾ ಪ್ರತಿ ಕಬ್ಬು ಬೆಳೆಗಾರರ ಸಹಕಾರಿ ಸಂಘವು ಮೇಲ್ಕಂಡ ಕಾರ್ಖಾನೆಗೆ ಕಬ್ಬು ಸರಬರಾಜು ಮಾಡುವ ಕಬ್ಬಿನ ಪ್ರಮಾಣದ ಬಗ್ಗೆ ಕಾರ್ಖಾನೆಯು ಒಪ್ಪಂದ ಮಾಡಿಕೊಳ್ಳುವುದು.

7) ಮೇಲ್ಕಂಡ ಕಬ್ಬು ಮೀಸಲು ಪ್ರದೇಶದಿಂದ ಮೇಲೆ ಹಂಚಿಕೆ ಮಾಡಲಾದ ಕಾರ್ಖಾನೆಗೆ ಹೊರತು ಪಡಿಸಿ ಹೊರಗಿನ ಪ್ರದೇಶಕ್ಕೆ ಯಾವುದೇ ಕಾರಣಕ್ಕೂ ಜಿಲ್ಲಾಧಿಕಾರಿಗಳ ಆದೇಶವಿಲ್ಲದೆ ಸಾಗಣೆ ಮಾಡುವ ಹಾಗಿಲ್ಲ.

8) ಯಾವುದೇ ಸಕ್ಕರೆ ಕಾರ್ಖಾನೆಯು ತನಗೆ ಹಂಚಿಕೆಯಾದ ಕಬ್ಬು ಮೀಸಲು ಪ್ರದೇಶವನ್ನು ಹೊರತು ಪಡಿಸಿ ಬೇರೆ ಪ್ರದೇಶಗಳಲ್ಲಿ ಬೆಳೆದಿರುವ ಕಬ್ಬನ್ನು ಸಕ್ಷಮ ಪ್ರಾಧಿಕಾರದ ಅನುಮತಿ ಇಲ್ಲದೇ ಖರೀದಿಸಿದಲ್ಲಿ ಅಂತಹ ಕಾರ್ಖಾನೆಗಳ ವಿರುದ್ಧ ನಿಯಮಾನುಸಾರ ಕ್ರಮ ಜರುಗಿಸಲಾಗುವುದು.

9) ಕಬ್ಬು ಸಾಗಣೆ ಮಾಡಲು ಪರವಾನಿಗೆ ಮಂಜೂರಾತಿ ಅರ್ಜಿಯನ್ನು ನಮೂನೆ–2ರಲ್ಲಿ ರೂ. 5/– ಶುಲ್ಕ ಮತ್ತು ರೂ. 100/– ಭದ್ರತಾ ಠೇವಣಿ ಶುಲ್ಕದೊಂದಿಗೆ ಸಲ್ಲಿಸತಕ್ಕದ್ದು. ಒಪ್ಪಂದದ ಯಾವುದೇ ಷರತ್ತು ಉಲ್ಲಂಘಿಸಿದಲ್ಲಿ ಆ ಬಗ್ಗೆ ಜಿಲ್ಲಾಧಿಕಾರಿಯು ಸಂಬಂಧಪಟ್ಟವರಿಗೆ ಕಾರಣ ಕೇಳುವ ನೋಟೀಸು ಜಾರಿ ಮಾಡಿ, ಹೇಳಿಕೆ ಪಡೆದು ಸೂಕ್ತವೆಂದು ಕಂಡುಬಂದಲ್ಲಿ ಭದ್ರತಾ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಸೂಕ್ತ ಆದೇಶ ಹೊರಡಿಸಬಹುದು.

10) ಈ ಅಧಿಸೂಚನೆ ಮೂಲಕ ಹಂಚಿಕೆ ಮಾಡಿರುವ ಕಬ್ಬು ಮೀಸಲಾತಿ ಪ್ರದೇಶಗಳನ್ನು ಪರಿಷ್ಕರಿಸುವ ಅಥವಾ ರದ್ದುಪಡಿಸುವ ಹಕ್ಕನ್ನು ರಾಜ್ಯ ಸರ್ಕಾರ ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಈ. ಶಿವರುದ್ರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ (ಸಕ್ಕರೆ),

ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ

**P.R. 94**

**SC 200**

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಐ 181 ಎಸ್‌ಜಿಎಫ್ 2013, ಬೆಂಗಳೂರು, ದಿನಾಂಕ: 23ನೇ ಡಿಸೆಂಬರ್, 2014**

'ದಿ ಮಾರ್ಕಂಡೇಯ ಕೋ–ಆಪರೇಟೀವ್ ಶುಗರ್ ಮಿಲ್ಸ್ ಲಿಮಿಟೆಡ್' ಎಂಬ ಹೆಸರಿನಲ್ಲಿ ಸಕ್ಕರೆ ಕಾರ್ಖಾನೆಯು ದಿನಾಂಕ: 15–10–1991ರಂದು ಕರ್ನಾಟಕ ಸಹಕಾರಿ ಸಂಘಗಳ ಅಧಿನಿಯಮ, 1959ರ ಕಲಂ 7 ಅಡಿ ನೋಂದಣಿ ಸಂಖ್ಯೆ: ಡಿಎಸ್‌ಕೆ/ಎಲ್‌ಜಿಎಲ್/ಆರ್‌ಜಿಎನ್–13/91–92 ಅಡಿ ನೋಂದಣಿಯಾಗಿದ್ದು, ಕಾಕತಿ ಗ್ರಾಮ, ಬೆಳಗಾವಿ ತಾಲ್ಲೂಕು, ಬೆಳಗಾವಿ ಜಿಲ್ಲೆ ಇಲ್ಲಿ ಸ್ಥಾಪಿತವಾಗಿರುತ್ತದೆ. ಈ ಕಾರ್ಖಾನೆಗೆ ಭಾರತ ಸರ್ಕಾರವು ತನ್ನ ದಿನಾಂಕ: 23–03–1994ರ ಪತ್ರ ಸಂಖ್ಯೆ: ಎಲ್‌ಐ/177 (1994)ರಲ್ಲಿ 2500 ಟಿಸಿಡಿ ಸಾಮರ್ಥ್ಯಕ್ಕೆ 3 ವರ್ಷಗಳ ಅವಧಿಗೆ ಕೈಗಾರಿಕಾ ಲೈಸೆನ್ಸ್ ನೀಡಿರುತ್ತದೆ.

2. 'ದಿ ಮಾರ್ಕಂಡೇಯ ಕೋ–ಆಪರೇಟೀವ್ ಶುಗರ್ ಮಿಲ್ಸ್ ಲಿಮಿಟೆಡ್' ಸಕ್ಕರೆ ಕಾರ್ಖಾನೆಯು ಸರ್ಕಾರಕ್ಕೆ ಮನವಿ ಸಲ್ಲಿಸಿ ಸದರಿ ಕಾರ್ಖಾನೆಗೆ ಕಬ್ಬು ಮೀಸಲು ಕ್ಷೇತ್ರ ನಿಗಧಿಪಡಿಸುವಂತೆ ಕೋರಿರುತ್ತಾರೆ. ಈ ಸಂಬಂಧ ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ: 06–06–2014ರ ಪ್ರಸ್ತಾವನೆಯಲ್ಲಿ ಬೆಳಗಾವಿ ತಾಲ್ಲೂಕಿನ 41 ಗ್ರಾಮಗಳನ್ನು ಕಬ್ಬು ಮೀಸಲು ಕ್ಷೇತ್ರವನ್ನಾಗಿ 'ದಿ ಮಾರ್ಕಂಡೇಯ ಕೋ–ಆಪರೇಟೀವ್ ಶುಗರ್ ಮಿಲ್ಸ್ ಲಿಮಿಟೆಡ್' ಸಕ್ಕರೆ ಕಾರ್ಖಾನೆಗೆ ಹಂಚಿಕೆ ಮಾಡಲು ಶಿಫಾರಸ್ಸು ಮಾಡಿರುತ್ತಾರೆ. ಈ 41 ಗ್ರಾಮಗಳ ಪೈಕಿ 5 ಗ್ರಾಮಗಳು ಪ್ರಸ್ತುತ ಶ್ರೀ ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಸಂಕೇಶ್ವರ, ಬೆಳಗಾವಿ ಜಿಲ್ಲೆ ಮತ್ತು 7 ಗ್ರಾಮಗಳು ಪ್ರಸ್ತುತ ಶ್ರೀ ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಮುಗುಟಖಾನ, ಹುಬ್ಬಳ್ಳಿ ಇವರಿಗೆ ಹಂಚಿಕೆ ಮಾಡಿರುವ ಕಬ್ಬು ಮೀಸಲು ಕ್ಷೇತ್ರವಾಗಿರುತ್ತದೆ.

3. ರಾಜ್ಯದಲ್ಲಿ ಹೊಸ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಮತ್ತು ಹಾಲಿ ಕಾರ್ಯನಿರ್ವಹಿಸುತ್ತಿರುವ ಕಾರ್ಖಾನೆಗಳ ಸಾಮರ್ಥ್ಯ ವಿಸ್ತರಿಸುವ ಬಗ್ಗೆ ರಾಜ್ಯ ಸರ್ಕಾರದ ನೀತಿಯನ್ನು ಸರ್ಕಾರದ ಆದೇಶ ಸಂಖ್ಯೆ: ಸಿಐ 187 ಎಸ್‌ಜಿಎಫ್ 2007, ದಿನಾಂಕ: 11–09–2007ರಲ್ಲಿ ಪ್ರಕಟಿಸಲಾಗಿದೆ. ಅದರಂತೆ ಹೊಸ ಸಕ್ಕರೆ ಕಾರ್ಖಾನೆಗಳಿಗ ಕಬ್ಬಿನ ಮೀಸಲು ಕ್ಷೇತ್ರವನ್ನು 15 ಕಿ.ಮೀ. ಅಂತರದೊಳಗೆ ಹಂಚಿಕೆ ಮಾಡತಕ್ಕದ್ದು. ಒಂದು ವೇಳೆ 15 ಕಿ.ಮೀ. ಅಂತರದೊಳಗೆ ಸಾಕಷ್ಟು ಕಬ್ಬು ದೊರೆಯದಿದ್ದಲ್ಲಿ 15 ಕಿ.ಮೀ. ಹೊರಗಿನ ಕಬ್ಬಿನ ಮೀಸಲು ಕ್ಷೇತ್ರವನ್ನು ಹಂಚಿಕೆ ಮಾಡಬಹುದು. ಆದರೆ. ಈ ರೀತಿ ಹಂಚಿಕೆ ಮಾಡಲಾದ ಪ್ರದೇಶವು ಹಾಲಿ ಇರುವ ಬೇರೆ ಸಕ್ಕರೆ ಕಾರ್ಖಾನೆಗಳ 15 ಕಿ.ಮೀ. ವ್ಯಾಪ್ತಿಯ ಹೊರಗಡೆ ಇರತಕ್ಕದ್ದು ಎಂದು ನಿಗದಿ ಪಡಿಸಿದೆ.

4. ಭಾರತ ಸರ್ಕಾರವು ಹೊರಡಿಸಿರುವ 'ಕಬ್ಬು (ನಿಯಂತ್ರಣ) ಆದೇಶ, 1966' ರ ಕಂಡಿಕೆ 6ರಲ್ಲಿ ಕಬ್ಬು ವಿತರಣೆ ಮತ್ತು ಸಾಗಾಟವನ್ನು ನೇರ ಕೇಂದ್ರ ಸರ್ಕಾರಕ್ಕೆ ಅಧಿಕಾರ ನೀಡಲಾಗಿದ್ದು, ಈ ಅಧಿಕಾರವನ್ನು ಕೇಂದ್ರ ಸರ್ಕಾರವು ರಾಜ್ಯ ಸರ್ಕಾರಕ್ಕೆ ಮರು ಹಂಚಿಕೆ ಮಾಡಿರುತ್ತದೆ. ಅದರಂತೆ ಬೆಳಗಾವಿ ಜಿಲ್ಲೆಯ ಬೆಳಗಾವಿ ತಾಲ್ಲೂಕಿನ ಈ ಕೆಳಕಂಡ 41 ಗ್ರಾಮಗಳನ್ನು ಸ್ಥಳೀಯ ಸಕ್ಕರೆ ಕಾರ್ಖಾನೆಗೆ ಕಬ್ಬು ಸರಬರಾಜು ಮಾಡುವ ಸಲುವಾಗಿ 'ದಿ ಮಾರ್ಕಂಡೇಯ ಕೋ–ಆಪರೇಟೀವ್ ಶುಗರ್ ಮಿಲ್ಸ್ ಲಿಮಿಟೆಡ್' ಕಾಕತಿ ಗ್ರಾಮ, ಬೆಳಗಾವಿ ತಾಲ್ಲೂಕು, ಬೆಳಗಾವಿ ಜಿಲ್ಲೆ ಈ ಕಾರ್ಖಾನೆಗೆ ಕಬ್ಬು ಮೀಸಲು ಕ್ಷೇತ್ರಗಳನ್ನಾಗಿ ಹಂಚಿಕೆ ಮಾಡಿದೆ.

| ಕ್ರಮ ಸಂಖ್ಯೆ | ಗ್ರಾಮಗಳ ಹೆಸರು | ಅಂತರ (ಕಿ.ಮೀ.) |
|---|---|---|
| 1. | ಬಂಬರಗಾ | 6 |
| 2. | ಭೂತರಾಮನಹಟ್ಟಿ | 5 |
| 3. | ಕಡೋಲಿ+ಬಿ+ಸಿ | 5 |
| 4. | ರಾಮದುರ್ಗ | 6 |
| 5. | ಸೋನಟ್ಟಿ | 2 |

| ಕ್ರಮ ಸಂಖ್ಯೆ | ಗ್ರಾಮಗಳ ಹೆಸರು | ಅಂತರ (ಕಿ.ಮೀ.) |
|---|---|---|
| 6. | ಗೌಂಡವಾಡ | 4 |
| 7. | ಹೊನಗಾ | 2 |
| 8. | ಕಂಗ್ರಾಳಿ ಬಿ.ಕೆ. | 3 |
| 9. | ಕಂಗ್ರಾಳಿ ಕೆ.ಹೆಚ್. | 6 |
| 10. | ಯಮುನಾಪುರ | 3 |
| 11. | ಕಾಕತಿ | 1 |
| 12. | ಅಗಸಗಾ | 7 |
| 13. | ಅಷ್ಟೆ | 7 |
| 14. | ಭರಮಹಟ್ಟಿ | 5 |
| 15. | ಗೋಧಿಹಾಳ | 6 |
| 16. | (ಎ) ಜುಮ್ಮಾಳ/ಹೆಗ್ಗೆರಿ | 4 |
| 17. | (ಎ) ಬೆನ್ನಾಳಿ | 4 |
| 18. | (ಎ) ಜಾಫರವಾಡಿ | 7 |
| 19. | (ಬಿ) ದೇವಗಿರಿ | 3 |
| 20. | (ಸಿ) ಗುಂಜೆನಟ್ಟಿ | 6 |
| 21. | (ಸಿ) ಮುತ್ತೆನಟ್ಟಿ | 3 |
| 22. | ಕಣಬರ್ಗಿ | 5 |
| 23. | ಕೇದನೂರ | 6 |
| 24. | (ಎ) ಮಣ್ಣಿಕೇರಿ | 7 |
| 25. | ಮುಚ್ಚಂಡಿ | 6 |
| 26. | ಕಾಮನಹಟ್ಟಿ | 7 |
| 27. | ಬಾಬಮಾನಹಟ್ಟಿ | 6 |
| 28. | ಲಗಮಾಪೂರ | 7 |
| 29. | ವೀರನಭಾವಿ | 5 |
| 30. | ನಾರಣಹಳ್ಳಿ | 5 |
| 31. | ಹೆಕ್ಕೆರಿ | 4 |
| 32. | ಬಸನಾಳ | 4 |
| 33. | ನರನಹಳ್ಳಿ | 5 |
| 34. | ಹಸೂರ | 5 |
| 35. | ಬೈಲೂರ | 5 |
| 36. | ಗಂಗೇನಹಳ್ಳಿ | 3 |
| 37. | ಬಾಮನಹಳ್ಳಿ | 7 |
| 38. | ಕರವಿ | 7 |
| 39. | ಮಾಸರಹಟ್ಟಿ | 1 |
| 40. | ಗಂಡಗುಪ್ಪಿ | 4 |
| 41. | (ಎ) ನ್ಯೂ ವಂಟಮುರಿ | 6 |

5. ಮೇಲ್ಕಂಡ ಪಟ್ಟಿಯಲ್ಲಿನ ಕ್ರಮ ಸಂಖ್ಯೆ: 1 ರಿಂದ 5 ರವರೆಗಿನ ಬಂಬರಗಾ, ಭೂತರಾಮನಹಟ್ಟಿ, ಕಡೋಲಿ+ಬಿ+ಸಿ, ರಾಮದುರ್ಗ ಮತ್ತು ಸೋನಟ್ಟಿ ಒಟ್ಟು 5 ಗ್ರಾಮಗಳನ್ನು ಶ್ರೀ ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಸಂಕೇಶ್ವರ, ಬೆಳಗಾವಿ ಜಿಲ್ಲೆ ಈ ಕಾರ್ಖಾನೆಗೆ ಕಬ್ಬು ಮೀಸಲು ಕ್ಷೇತ್ರವನ್ನಾಗಿ ಈ ಹಿಂದೆ ಹಂಚಿಕೆ ಮಾಡಿದ್ದನ್ನು ಹಿಂದಕ್ಕೆ ಪಡೆಯಲಾಗಿದೆ.

6. ಮೇಲ್ಕಂಡ ಪಟ್ಟಿಯಲ್ಲಿನ ಕ್ರಮ ಸಂಖ್ಯೆ 6 ರಿಂದ 12 ರವರೆಗಿನ ಗೌಂಡವಾಡ, ಹೊನಗಾ, ಕಂಗ್ರಾಳಿ ಬಿ.ಕೆ., ಕಂಗ್ರಾಳಿ ಕೆ.ಹೆಚ್., ಯಮುನಾಪುರ, ಕಾಕತಿ ಮತ್ತು ಅಗಸಗಾ ಒಟ್ಟು 7 ಗ್ರಾಮಗಳನ್ನು ಶ್ರೀ ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಮುಗುಟಖಾನ, ಹುಬ್ಬಳ್ಳಿ ಈ ಕಾರ್ಖಾನೆಗೆ ಕಬ್ಬು ಮೀಸಲು ಕ್ಷೇತ್ರವನ್ನಾಗಿ ಈ ಹಿಂದೆ ಹಂಚಿಕೆ ಮಾಡಿದ್ದನ್ನು ಹಿಂದಕ್ಕೆ ಪಡೆಯಲಾಗಿದೆ.

7. ಮೇಲ್ಕಂಡ ಕಬ್ಬು ಮೀಸಲು ಕ್ಷೇತ್ರ ಹಂಚಿಕೆಯು ಈ ಕೆಳಕಂಡ ಷರತ್ತಿಗೊಳಪಟ್ಟಿರುತ್ತದೆ.

1) ಈ ಹಂಚಿಕೆಯು ಕೇಂದ್ರ ಸರ್ಕಾರ/ರಾಜ್ಯ ಸರ್ಕಾರ ಕಾಲ ಕಾಲಕ್ಕೆ ಹೊರಡಿಸುವ ಅಧಿನಿಯಮ/ನಿಯಮಗಳು/ಸೂಚನೆಗಳಿಗೆ ಒಳಪಟ್ಟಿರುತ್ತದೆ.

2) 'ದಿ ಮಾರ್ಕಂಡೇಯ ಕೋ–ಆಪರೇಟೀವ್ ಶುಗರ್ ಮಿಲ್ಸ್ ಲಿಮಿಟೆಡ್' ಕಾರ್ಖಾನೆಯು ಕಾರ್ಖಾನೆ ನಡೆಸಲು ಅಗತ್ಯವಿರುವ ಭಾರತ ಸರ್ಕಾರ/ಸಕ್ಷಮ ಪ್ರಾಧಿಕಾರವು ನೀಡುವ ಚಾಲ್ತಿಯಲ್ಲಿರುವ ಕೈಗಾರಿಕಾ ಲೈಸೆನ್ಸ್‌ನ್ನು ಹೊಂದಿರತಕ್ಕದ್ದು.

3) ಕಬ್ಬು ಮೀಸಲು ಕ್ಷೇತ್ರಗಳನ್ನು ಹಂಚಿಕೆ ಪಡೆದ ಕಾರ್ಖಾನೆಯು ಮೇಲೆ ನಿಗದಿಪಡಿಸಿರುವ ಪ್ರದೇಶದಿಂದಲೇ ಕಬ್ಬನ್ನು ಪಡೆಯತಕ್ಕದ್ದು. ಹೊಸ ಕಾರ್ಖಾನೆಗಳು ಸ್ಥಾಪನೆಯಾಗುವವರೆಗೂ ರೈತರ ಹಿತದೃಷ್ಟಿಯಿಂದ ಸಂಬಂಧಪಟ್ಟ ಕಾರ್ಖಾನೆಗಳಿಗೆ ಕಬ್ಬು ಸರಬರಾಜು ಮಾಡುವವರೆಗೆ ಈ ಕಬ್ಬು ಮೀಸಲು ಕ್ಷೇತ್ರ ತಾತ್ಕಾಲಿಕವಾಗಿರುತ್ತದೆ.

4) 'ದಿ ಮಾರ್ಕಂಡೇಯ ಕೋ–ಆಪರೇಟೀವ್ ಶುಗರ್ ಮಿಲ್ಸ್ ಲಿಮಿಟೆಡ್' ಕಾರ್ಖಾನೆಯು ಕಬ್ಬು ನುರಿಸುವ ಸಾಮರ್ಥ್ಯವು 2500 ಟಿಸಿಡಿಯು ಇದ್ದು, ಸದರಿ ಕಾರ್ಖಾನೆಗೆ ವಾರ್ಷಿಕವಾಗಿ ಲಭ್ಯವಾಗುವ ಕಬ್ಬಿನ ಪ್ರಮಾಣವು 2.36 ಲಕ್ಷ ಮೆ.ಟನ್ ಇರುತ್ತದೆ. ಈ ಕಾರ್ಖಾನೆಯು ಹಂಚಿಕೆಯಾದ ಪ್ರದೇಶಗಳಿಗೆ ಹೊಸ ಕಾರ್ಖಾನೆಗಳು ಸ್ಥಾಪನೆಯಾಗುವವರೆಗೆ ತಾತ್ಕಾಲಿಕವಾಗಿ ಕಬ್ಬನ್ನು ರೈತರಿಂದ ಖರೀದಿಸಬಹುದಾಗಿದೆ.

5) ಕಬ್ಬು ಮೀಸಲು ಪ್ರದೇಶದ ಪ್ರತಿ ಕಬ್ಬು ಬೆಳೆಗಾರ ತಾನು ಬೆಳೆದ ಕಬ್ಬಿನ ಶೇ. 95 ರಷ್ಟನ್ನು ಮೇಲ್ಕಂಡ ಕಾರ್ಖಾನೆಗೆ ನೇರವಾಗಿ ಅಥವಾ ಕಬ್ಬು ಬೆಳೆಗಾರರ ಸಹಕಾರಿ ಸಂಘದ ಮೂಲಕ ಸರಬರಾಜು ಮಾಡುವುದು.

6) ಕಬ್ಬು ಮೀಸಲು ಪ್ರದೇಶದಲ್ಲಿನ ಪ್ರತಿ ಕಬ್ಬು ಬೆಳೆಗಾರ ಅಥವಾ ಪ್ರತಿ ಕಬ್ಬು ಬೆಳೆಗಾರರ ಸಹಕಾರಿ ಸಂಘವು ಮೇಲ್ಕಂಡ ಕಾರ್ಖಾನೆಗೆ ಕಬ್ಬು ಸರಬರಾಜು ಮಾಡುವ ಕಬ್ಬಿನ ಪ್ರಮಾಣದ ಬಗ್ಗೆ ಕಾರ್ಖಾನೆಯು ಒಪ್ಪಂದ ಮಾಡಿಕೊಳ್ಳುವುದು.

7) ಮೇಲ್ಕಂಡ ಕಬ್ಬು ಮೀಸಲು ಪ್ರದೇಶದಿಂದ ಮೇಲೆ ಹಂಚಿಕೆ ಮಾಡಲಾದ ಕಾರ್ಖಾನೆಗೆ ಹೊರತು ಪಡಿಸಿ ಹೊರಗಿನ ಪ್ರದೇಶಕ್ಕೆ ಯಾವುದೇ ಕಾರಣಕ್ಕೂ ಜಿಲ್ಲಾಧಿಕಾರಿಗಳ ಆದೇಶವಿಲ್ಲದೆ ಸಾಗಣೆ ಮಾಡುವ ಹಾಗಿಲ್ಲ.

8) ಯಾವುದೇ ಸಕ್ಕರೆ ಕಾರ್ಖಾನೆಯು ತನಗೆ ಹಂಚಿಕೆಯಾದ ಕಬ್ಬು ಮೀಸಲು ಪ್ರದೇಶವನ್ನು ಹೊರತು ಪಡಿಸಿ ಬೇರೆ ಪ್ರದೇಶಗಳಲ್ಲಿ ಬೆಳೆದಿರುವ ಕಬ್ಬನ್ನು ಸಕ್ಷಮ ಪ್ರಾಧಿಕಾರದ ಅನುಮತಿ ಇಲ್ಲದೇ ಖರೀದಿಸಿದಲ್ಲಿ ಅಂತಹ ಕಾರ್ಖಾನೆಗಳ ವಿರುದ್ಧ ನಿಯಮಾನುಸಾರ ಕ್ರಮ ಜರುಗಿಸಲಾಗುವುದು.

9) ಕಬ್ಬು ಸಾಗಣೆ ಮಾಡಲು ಪರವಾನಿಗೆ ಮಂಜೂರಾತಿ ಅರ್ಜಿಯನ್ನು ನಮೂನೆ–2ರಲ್ಲಿ ರೂ. 5/– ಶುಲ್ಕ ಮತ್ತು ರೂ. 100/– ಭದ್ರತಾ ಠೇವಣಿ ಶುಲ್ಕದೊಂದಿಗೆ ಸಲ್ಲಿಸತಕ್ಕದ್ದು. ಒಪ್ಪಂದದ ಯಾವುದೇ ಷರತ್ತು ಉಲ್ಲಂಘಿಸಿದಲ್ಲಿ ಆ ಬಗ್ಗೆ ಜಿಲ್ಲಾಧಿಕಾರಿಯು ಸಂಬಂಧಪಟ್ಟವರಿಗೆ ಕಾರಣ ಕೇಳುವ ನೋಟೀಸು ಜಾರಿ ಮಾಡಿ, ಹೇಳಿಕೆ ಪಡೆದು ಸೂಕ್ತವೆಂದು ಕಂಡುಬಂದಲ್ಲಿ ಭದ್ರತಾ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಸೂಕ್ತ ಆದೇಶ ಹೊರಡಿಸಬಹುದು.

10) ಈ ಅಧಿಸೂಚನೆ ಮೂಲಕ ಹಂಚಿಕೆ ಮಾಡಿರುವ ಕಬ್ಬು ಮೀಸಲಾತಿ ಪ್ರದೇಶಗಳನ್ನು ಪರಿಷ್ಕರಿಸುವ ಅಥವಾ ರದ್ದುಪಡಿಸುವ ಹಕ್ಕನ್ನು ರಾಜ್ಯ ಸರ್ಕಾರ ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

P.R. 95

**ಈ. ಶಿವರುದ್ರಪ್ಪ**

SC. 200

ಸರ್ಕಾರದ ಅಧೀನ ಕಾರ್ಯದರ್ಶಿ (ಸಕ್ಕರೆ),

ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ

## INFRASTRUCTURE DEVELOPMENT SECRETARIAT

**Sub :** Termination of Project Development Agreement & Land Lease Deed - Gulbarga Airport Project.

**Read :**

1. G.O. No. IDD 24 DIA 2000, dated 23.03.2007.
2. G.O. IDD 85 DIA 2008 dated 18.02.2010.
3. Letter No. GADL/ 2012-13/ 023, dated 23.08.2012.
4. Letter No. GADPL/2012-13/037, dated 19.12.2012.
5. Proceedings of the meeting held on 19.03.2013.
6. Letter No. IDD 85 DIA 2008 dated 22.01.2013 and 30.03.2013.
7. Letter No: Nil, dated: 08.05.2013 of IL & FS, Transportation Network Limited.
8. Letter No. Nil, dated: 24.05.2013 of IL & FS, Transportation Network Limited.
9. Proceedings of the meeting held on 25.07.2013.

10. Government Letter No. IDD 92 DIA 2013 dated 25.07.2013.
11. Government Letter No. IDD 85 DIA 2008 dated 8.8.2013.
12. Proceedings of the meeting held on 27.12.2013.
13. Proceedings of the meeting held on 16.05.2014.
14. Government Letter dated 19.05.2014.
15. Proceedings of the meeting held on 06.06.2014.
16. DRT Order in O.A No.572 of 2014, dated 16.12.2014.
17. Appeal No. 14/2015 filed by the Bankers consortium before DRAT, Chennai

**Preamble:**

Government of Karnataka with a view to promoting balanced regional development across the State and to improve transportation linkages between the State Capital and other districts, accorded sanction to develop an airport at Gulbarga with private sector participation vide G.O. referred at (1) above.

2. After a competitive bid process, a consortium of companies i.e, NCC Infrastructure Holding Limited and VIE India Project Development & Holding LCC, led by M/s. Maytas Infra Limited, was selected to develop the above airports. In accordance with the Request for Proposal (RfP) document issued by the Government, the selected consortium set up a special purpose company viz., M/s. Gulbarga Airport Developers Private Limited (GADL) for development of Gulbarga Airport Project. Accordingly, a Project Development Agreement (PDA) was entered into between the Government and the aforesaid special purpose company on 2.4.2008, whereby Government granted them the rights to construct and operate the airports for a period of 30 years. At the time of signing the PDA, as required under the RfP document, the company submitted to Government, a Bank Guarantee to the extent of Rs. 2.5 Crores towards security for its performance of the terms and conditions of the PDA. When the airport land was handed over to the company by the Deputy Commissioner of Gulbarga, separate Land Lease Deed was also executed on 22.05.2010.

3. In accordance with the PDA and Land Lease Deeds, the aforesaid company was required to comply with the relevant laws for the construction and maintenance of airports by private sector, obtain necessary permits and approvals from Central and State Government departments and commence airport operations by 1.04.2010 i.e. within 24 months from the date of signing of the Project Development Agreement.

4. However, M/s. Maytas Infra Limited, the Lead Member of the Consortium, got into financial difficulties and could not proceed with the project. With the approval of the Company Law Board, IL & FS stepped in as the new promoters of M/s. Maytas Infra Limited. After approval of the Government and with the intervention of MoCA, M/s. Maytas Infra Limited was replaced with M/s. IL&FS. Later, IL&FS sought to implement the project through IL&FS Engineering Construction Company Limited., (IECCL) with 26% shareholding in GADL. Meantime, IL&FS took 40% of equity stake through their group company viz. IL&FS Transportation Network Ltd. (ITNL) in a company viz. M/s. Regional Airport-Holdings International Limited (RAHI) (earlier M/s. Comet Infra Developments Pvt Ltd) and 22% stake in GADL was sold to RAHI. Remaining 60% of equity stake in RAHI is held by M/s. Rahi Aviation Holding Pvt. Ltd. The present share holding pattern of the developers is as follows;




5. In view of the economic slowdown and resultant delays caused in the construction of the airport, the aforesaid company requested Government for deferment of the lease rentals for a period of 10 years effective from its due date which was 22.05.2010. With an intention of improving the viability of the Project, Government through, G.O. IDD 85 DIA 2008 dated 18.02.2010 agreed to the request of the company with the conditions including a Bank Guarantee of Rs.9.69 crores.

6. To give effect to the deferment of lease rentals as stated above, supplementary agreement was entered into between Government and the company for Gulbarga airport on 22.5.2010.

**Delay in completion of the Gulbarga Airport - non compliance of the Project Development Agreement.**

7. According to the Supplementary Agreement dated 22.05.2010, GADL was required to achieve the airport opening within 24 months from its signing i.e., by 21.5.2012. The agreement provides that if GADL is unable to achieve airport opening within the said period of 24 months, another 12 months be allowed on payment of Liquidated Damages to Government to the extent of Rs. 10,000/- for each day of delay.

8. GADL through its Letter No. GADL/2012-13/023 dated 23.08.2012 gave reasons for delay in obtaining clearance from various agencies and site related issues as reasons for non-completion of construction work and sought extension in the period of airport opening to 21.12.2012. Further through their Letter No. GADPL/2012-13/037 dated 19.12.2012 requested for further extension upto 21.05.2013. In response to the same, Government through its Letter No. IDD 85 DIA 2008 dated 22.01.2013 allowed extension upto 30.03.2013.

9. In a review meeting held on 19.03.2013 Principal Secretary, Infrastructure Development Department (IDD) observed that there has been no progress in the construction work. The meeting was attended by shareholders of GADL Viz. Regional Airport-Holdings International Ltd (RAHI) and M/s IL&FS Transportation Networks Ltd. (ITNL). In the meeting for the first time the developers disclosed that there were certain internal conflicts between them on financial. matters which need to be settled first before airport construction could continue. In the meeting it was pointed out by the Secretary that conflicts between shareholders are internal matters of GADL and instructed that GADL should come out with a clear plan to complete the construction within the extended timeline or else, face action in accordance with the terms and conditions of PDA. Consequently one of the shareholder of GADL vide their letters dated: 08.05.2013 and 24.05.2013 communicated that they are in the process of resolving their internal conflict through judicial means like Company Law Board and arbitration and also reiterated their commitment to complete the project.

10. Noticing no further progress in construction of Gulbarga airport, a meeting was held on 25.07.2013 under the Chairmanship of Hon'ble Minister of State for Infrastructure Development and Information. In the said meeting, Government reiterated the responsibilities of GADL and sought completion of the projects in a timely manner. Subsequently, Government issued Letter No. IDD 92 DIA 2013 dated 25.07.2013 to the above company to provide within 7 days their plans and a firm date for completion of the projects.

11. As no firm commitment was received from GADL, Government decided to issue a show cause notice to GADL in the first instance. Accordingly, a notice bearing No. IDD 85 DIA 2008 was sent to GADL on 8.8.2013 giving 10 days time to show cause as to why Government should not terminate the PDA and Supplementary Agreement. In this show cause notice it was also stated that Government would invoke the bank guarantees and claim other sums payable by the Developer in terms of the Agreements and Land Lease Deed. No response in this regard has been received from GADL so far.

12. In view of the above circumstances the Hon'ble Minister again convened a meeting with the developers on 27.12.2013. In the meeting the Hon'ble Minister took a decision to grant time to come with a proposal to commence the works and the developers were informed that if they failed to submit a proposal, then government would take stringent action as per the provisions of Project Development Agreement.

13. A meeting was held under the Chairmanship of Principal Secretary, Infrastructure Development Department on 16.05.2014 and in the letter dated: 19.05.2014 the developers were given a final notice with one week's time to commence the works. Since there was no response a meeting was convened on 06.06.2014 under the Chairmanship of Chief Secretary. At the meeting it was decided to invoke the Bank Guarantee and terminate the Project Development Agreement.

14. As stated above, Government has given several opportunities to complete the construction of the airports and commence operations. However, the developers have failed to comply with the contractual terms. As per Clause 13.3.1 (ii) of the PDA they are in default as they have failed to achieve the airport opening within the time stipulated in the PDA and have also failed to pay liquidated damages for the additional period as provided in proviso to Clause 7.5 of the PDA. Thus, GADL having breached the terms and conditions of the PDA, Supplementary Agreement and also the Land Lease Deed, are liable to face termination of the airport contracts.

15. In view of the above and as decided in the meeting held on 06.06.2014 the bank guarantee of Rs.9.69 crores furnished by GADL has been invoked in favour of Government on 16.06.2014.

16. GADL has borrowed huge sums of money from a consortium of Bankers for development of the airport after mortgaging the land leased out by Government for the Project. In the background of the fact that the GADL failed to repay the loan to the bankers, the lenders have approached the Debt Recovery Tribunal for recovery of their dues. Lenders have also sent a notice under the SARFAESI Act for taking over the management of GADL and the procedural matters in this regard are already initiated by them. In the said petition filed by the Debt Recovery Tribunal, the Government has also been arraigned as a party, which is being contested separately. In its order dated 16.12.2014 in O.A No.572 of 2014, the DRT has ordered as follows;

> " The interim stay dated 22.05.2014 granted in IA NO. 2323/2014 filed by the Applicant -- Banks directing the GoK -- Defendant No.3 not to terminate the lease of the schedule property granted by it (GoK) to Defendant No.1 - GADPL stands vacated, subject to the condition that the encumbrances created by Defendant NO.1-GADPL by virtue of mortgage of lease hold rights in favour of Applicants - Banks at the time of availing loan in question from Applicants -- Banks

(Consortium) (i.e., leasehold rights available to the Applicants -- Banks under the registered mortgage deed in question and so also the value of the development works already undertaken in respect to project in question by Defendant No.1 on the leasehold property in question) stands continued till further orders.

By virtue of this order it is made clear that Defendant No.3-GoK is at liberty to call for tenders and entrust the work as deemed fit in the circumstances under the law to a third party (in the place of present Defendant No.1-GADPL) for completion of the project, subject to the encumbrance of the Applicants - Banks as stated above.

However, the present order stands stayed till 09.01.2015 only and the said interim order dated 22.05.2014 stands continued till 09.01.2015 to enable the parties to prefer appeal against the order passed by the Tribunal on these IAs, if they opt to do so.

Both the parties to the present proceedings being public institutions are impressed upon to take whatever measures those are suitable in the prevailing circumstances to ensure repayment of the loan in question as well to complete the project".

17. In its order dated 09.01.2015 the DRT has extended stay till 27.01.2015.

18. In the given background, the construction work of the Gulbarga airport has stopped completely for more than 20 months. With regard to Gulbarga airport the Government has appropriated the Bank Guarantee of Rs.9.69 crores furnished by GADL. In this regard also, a writ petition seeking direction for returning the Bank Guarantee by Government is filed by ITNL against Government and the same is also being contested by Government.

19. Subsequently the bankers have filed an Appeal No.14/2015 against order dated: 16.12.2014 of DRT. The State Government has filed its statement of objections to Appeal No. 14/2015 filed by the Bankers before DRAT, Chennai. The case had come up for hearing on 16.01.2015. After considering the submissions made by the State the DRAT did not grant extension of the interim order of stay.

20. In the above circumstances and after considering all aspects of the matter since the airport operations cannot be achieved by GADPL in the near future which adversely affects public interest and since the interim order of stay granted earlier has not been further extended it is decided by the Government, to terminate the Project Development Agreement and Land Lease Agreement. Accordingly, the following orders are issued:

**GOVERNMENT ORDER NO: IDD 53 DIA 2014, BENGALURU, DATED: 28.01.2015.**

In view of the detailed circumstances, explained in the preamble, the Project Development Agreement and Land Lease Agreement executed for the Gulbarga Airport is hereby terminated and any further action deemed fit and proper in the circumstances shall be undertaken. Further necessary action shall also be taken by the Government to entrust the development of Gulbarga Airport to Airports Authority of India.

2. This order is issued as per concurrence given by Finance Department vide its U.O. Note No. FD 1329 Exp-1/13, dated: 29.11.2013.

By Order and in the name of the Governor of Karnataka,

**M. VENKATESH MURTHY**

Under Secretary to Government-II,

Infrastructure Development Department

**P.R. 96**

**SC 100**

**ಸಹಕಾರ ಸಚಿವಾಲಯ**

**ವಿಷಯ :** 2014-15ನೇ ಸಾಲಿನಲ್ಲಿ ಮಂಜೂರಾಗಿರುವ ತಂತ್ರಜ್ಞಾನ ಮತ್ತು ಮಾನವ ಸಂಪನ್ಮೂಲ ಉನ್ನತೀಕರಿಸುವ ನಿಧಿ ಯೋಜನೆಯಡಿ ಕಂಪ್ಯೂಟರೈಸೇಷನ್ ಆಫ್ ಎಸ್.ಹೆಚ್.ಜಿ. / ಪಿ.ಎ.ಸಿ.ಎಸ್. ಯೋಜನೆಗೆ ಆಡಳಿತಾತ್ಮಕ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**

1) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಆರ್.ಸಿ.ಎಸ್./ಸಿ.ಆರ್.ಡಿ./ವೈ.ಸ./17/2014-15, ದಿನಾಂಕ:21-07-2014.
2) ಸರ್ಕಾರಿ ಆದೇಶ ಸಂಖ್ಯೆ: ಸಇ 54 ಆಂಆಸ (ಎ) 2014, ದಿನಾಂಕ: 05-05-2014.
3) ಸರ್ಕಾರಿ ಆದೇಶ ಸಂಖ್ಯೆ: ಸಇ 54 ಆಂಆಸ (ಎ) 2014, ದಿನಾಂಕ: 03-07-2014.
4) ಆರ್ಥಿಕ ಇಲಾಖೆಯ ಅ.ಟಿ. ಸಂಖ್ಯೆ: ಆಇ 170 ವೆಚ್ಚ-2/2014, ದಿನಾಂಕ: 28-04-2014.

**ಪ್ರಸ್ತಾವನೆ:-**

ಮೇಲೆ ಓದಲಾದ (1)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು 2014-15ನೇ ಸಾಲಿನಲ್ಲಿ ಸರ್ಕಾರವು ಲೆಕ್ಕ ಶೀರ್ಷಿಕೆ "2425-00-004-0-01-125 ಕಂಪ್ಯೂಟರೇಸೇಷನ್ ಆಫ್ ಎಸ್.ಹೆಚ್.ಜಿ. / ಪಿ.ಎ.ಸಿ.ಎಸ್. ಯೋಜನೆ" ಯಡಿಯಲ್ಲಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ/ಸ್ವಸಹಾಯ

ಗುಂಪುಗಳನ್ನು ಗಣಕೀಕರಣಗೊಳಿಸಲು ರೂ.211.70 ಲಕ್ಷಗಳ ಅವಕಾಶವನ್ನು ಕಲ್ಪಿಸಲಾಗಿರುತ್ತದೆ. ಸದರಿ ಅನುದಾನವನ್ನು ರಾಜ್ಯದಲ್ಲಿನ ಪ್ಯಾಕ್ಸ್‌ಗಳನ್ನು ಗಣಕಿಕರಣಗೊಳಿಸಲು ಬಳಸಲಾಗುವುದು ಎಂದು ತಿಳಿಸಿರುತ್ತಾರೆ. 2014–15ನೇ ಸಾಲಿನಲ್ಲಿ ಗಣಕೀಕರಣಕ್ಕೆ ಆಯ್ಕೆ ಮಾಡಲಾಗುವ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಗಣಕಯಂತ್ರ ಮತ್ತು ಪರಿಕರಗಳನ್ನು ಖರೀದಿಸಲು, ಸಂರಚನೆಯನ್ನು (configuration) ಇಲಾಖೆಯ ತಾಂತ್ರಿಕ ಅನುಮೋದನಾ ಸಮಿತಿಯಿಂದ (Technical Approval Panel) ಅನುಮೋದನೆ ಪಡೆದು, ಕರ್ನಾಟಕ ಸಾರ್ವಜನಿಕ ಸಂಗ್ರಹಗಳ ಪಾರದರ್ಶಕ ಕಾಯ್ದೆ, 1999ರ ನಿಯಮಾವಳಿಗಳನ್ವಯ ಮಾರಾಟಗಾರರನ್ನು ಆಯ್ಕೆ ಮಾಡಲು ಅಥವಾ ಡಿಜಿಎಸ್ & ಡಿ ದರದಲ್ಲಿ ಖರೀದಿಸಲು ಆಯಾ ಜಿಲ್ಲಾ ಉಪ–ನಿಬಂಧಕರುಗಳಿಗೆ ಅನುದಾನವನ್ನು ಹಂಚಿಕೆ ನೀಡಲಾಗುವುದು. ಗಣಕಯಂತ್ರ ಮತ್ತು ಪರಿಕರಗಳನ್ನು ಮಾರಾಟಗಾರರು ಅಳವಡಿಸಿದ ನಂತರ ಆಯಾ ಜಿಲ್ಲಾ ಸಹಕಾರ ಸಂಘಗಳ ಉಪ–ನಿಬಂಧಕರುಗಳ ಮುಖಾಂತರ ಸಂಬಂಧಿಸಿದ ಮಾರಾಟಗಾರರಿಗೆ ಅನುದಾನವನ್ನು ಬಿಡುಗಡೆ ಮಾಡಲಾಗುವುದು. ಸದರಿ ಯೋಜನೆಯು 2014–15ನೇ ಸಾಲಿಗೆ ಹೊಸ ಯೋಜನೆಯಾಗಿದ್ದು, ಯೋಜನೆಯನ್ನು ಅನುಷ್ಠಾನಗೊಳಿಸಲು ಯೋಜನಾ ಇಲಾಖೆ ಹಾಗೂ ಆರ್ಥಿಕ ಇಲಾಖೆಯ ಸಹಮತಿ ಪಡೆದು ಆಡಳಿತಾತ್ಮಕ ಆದೇಶವನ್ನು ಹೊರಡಿಸಬೇಕೆಂದು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (2) ಮತ್ತು (3)ರ ಆದೇಶಗಳಲ್ಲಿ ಈ ಯೋಜನೆಯನ್ನು ಅನುಷ್ಠಾನಗೊಳಿಸಿ ಆದೇಶ ಹೊರಡಿಸದಿದ್ದ ಕಾರಣ ಮೇಲೆ ಓದಲಾದ (4)ರಲ್ಲಿ ಆರ್ಥಿಕ ಇಲಾಖೆಯು ಕೆಲವು ಯೋಜನೆಗಳನ್ನು ವಿಲೀನಗೊಳಿಸಿ ಅನುದಾನವನ್ನು ಹಂಚಿಕೆ ಮಾಡಿದ್ದು, ಈ ಮೊತ್ತವನ್ನು ಇಲಾಖೆಯ ಕಾರ್ಯಯೋಜನೆಯಲ್ಲಿ ಅಳವಡಿಸಿಕೊಂಡು ಅನುಷ್ಠಾನಗೊಳಿಸಲು ತಿಳಿಸಲಾಗಿರುತ್ತದೆ.

ಆರ್ಥಿಕ ಇಲಾಖೆ ಮತ್ತು ಯೋಜನಾ ಇಲಾಖೆ ಕ್ರಮವಾಗಿ ಸದರಿ ಯೋಜನೆಯನ್ನು ಅನುಷ್ಠಾನಗೊಳಿಸಲು ಸಹಮತಿ ನೀಡಿರುವುದರಿಂದ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 259 ಸಿಎಲ್ಎಸ್ 2014, ಬೆಂಗಳೂರು, ದಿನಾಂಕ: 17–09–2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, 2014–15ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ "2425–00–004–0–01–125 ಕಂಪ್ಯೂಟರೈಸೇಷನ್ ಆಫ್ ಎಸ್.ಹೆಚ್.ಜಿ. / ಪಿ.ಎ.ಸಿ.ಎಸ್. ಯೋಜನೆ" ಯಡಿ ರೂ.211.70 ಲಕ್ಷಗಳ ಮೊತ್ತದಲ್ಲಿ ಯೋಜನೆಯನ್ನು ಅನುಷ್ಠಾನಗೊಳಿಸಲು ಆಡಳಿತಾತ್ಮಕ ಅನುಮೋದನೆ ನೀಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 281 ವೆಚ್ಚ–2/2014, ದಿನಾಂಕ: 04–09–2014 ಮತ್ತು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಪಿಡಿ 36 ಎಫ್ಆರ್ಓ 2014, ದಿನಾಂಕ: 09–09–2014ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟಸ್ವಾಮಿ,**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ

ಸಹಕಾರ ಇಲಾಖೆ

P.R. 824

## ಸಹಕಾರ ಸಚಿವಾಲಯ

**ವಿಷಯ :** ಸ್ವಸಹಾಯ ಗುಂಪುಗಳ ಸಾಲಗಳ ಮೇಲಿನ ಬಡ್ಡಿ ಸಹಾಯಧನ ಯೋಜನೆಯಲ್ಲಿ ಹಣ ಬಿಡುಗಡೆ ಮಾಡುವ ಬಗ್ಗೆ ಆದೇಶ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಸಇ 54 ಅಂಅಸ(ಎ) 2014, ಬೆಂಗಳೂರು, ದಿನಾಂಕ: 05–05–2014 ಮತ್ತು 03–07–2014.
2) ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 03 ಟಿಎಫ್‌ಪಿ 2014, ಬೆಂಗಳೂರು, ದಿನಾಂಕ: 04–04–2014.
3) ಸರ್ಕಾರಿ ಆದೇಶ ಸಂಖ್ಯೆ: ಸಿಒ 212 ಸಿಎಲ್ಎಸ್ 2014, ದಿನಾಂಕ: 10–06–2014.
4) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಸಿಆರ್‌ಡಿ/ಸಿಎಬಿ1/10/2014–15, ದಿನಾಂಕ: 31–07–2014.

**ಪ್ರಸ್ತಾವನೆ:–**

ಸಹಕಾರ ಇಲಾಖೆಯ ಸ್ವಸಹಾಯ ಗುಂಪುಗಳ ಸಾಲಗಳ ಮೇಲಿನ ಬಡ್ಡಿ ಸಹಾಯಧನ ಯೋಜನೆಯಲ್ಲಿ 2014–15ನೇ ಸಾಲಿಗೆ ರೂ.2000.00 ಲಕ್ಷಗಳ ಆಯವ್ಯಯದ ಅವಕಾಶ ಕಲ್ಪಿಸಿದೆ.

ಮೇಲೆ ಓದಲಾದ (1)ರ ಸರ್ಕಾರದ ಆದೇಶಗಳಲ್ಲಿ ಸಹಕಾರ ಇಲಾಖೆಯ ಮುಂದುವರಿದ ಯೋಜನೆಗಳಲ್ಲಿ ಸ್ವಸಹಾಯ ಗುಂಪುಗಳ ಸಾಲಗಳ ಮೇಲಿನ ಬಡ್ಡಿ ಸಹಾಯಧನ ಯೋಜನೆಗೆ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ (2)ರ ಸರ್ಕಾರದ ಆರ್ಥಿಕ ಇಲಾಖೆಯ ದಿನಾಂಕ: 04–04–2014ರ ಆದೇಶದಲ್ಲಿ ಯೋಜನೆಯ ವಾರ್ಷಿಕ ಒಟ್ಟು ಅವಕಾಶದ ಶೇಕಡಾ 50ರಷ್ಟನ್ನು ಎರಡು ಕಂತಿನಲ್ಲಿ ತಲಾ ಶೇಕಡಾ 25ರಂತೆ ಮೊದಲನೇ ತ್ರೈಮಾಸಿಕ ಹಾಗೂ ಎರಡನೇ ತ್ರೈಮಾಸಿಕದಲ್ಲಿ ಬಿಡುಗಡೆ ಮಾಡಲು ಇಲಾಖೆಯ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಯವರಿಗೆ ಅಧಿಕಾರ ನೀಡಲಾಗಿದೆ.

ಮೇಲೆ ಓದಲಾದ (3)ರ ಸರ್ಕಾರದ ಆದೇಶದಲ್ಲಿ ಸ್ವಸಹಾಯ ಗುಂಪುಗಳ ಸಾಲಗಳ ಮೇಲಿನ ಬಡ್ಡಿ ಸಹಾಯಧನ ಯೋಜನೆಯಲ್ಲಿ ರೂ.500.00 ಲಕ್ಷಗಳನ್ನು ಮೊದಲನೇ ತ್ರೈಮಾಸಿಕದಲ್ಲಿ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (4)ರ ಪ್ರಸ್ತಾವದಲ್ಲಿ ಸಹಕಾರ ಸಂಘಗಳ ನಿಬಂಧಕರು ರಾಜ್ಯದ ಕೃಷಿ ಪತ್ತಿನ ಸಹಕಾರ ಸಂಸ್ಥೆಗಳು ಸ್ವಸಹಾಯ ಗುಂಪುಗಳಿಗೆ ನೀಡುವ ಸಾಲದ ಮೇಲಿನ ಬಡ್ಡಿ ಸಹಾಯಧನ ನೀಡುವ ಯೋಜನೆಯಡಿ ಬಿಡುಗಡೆಗೆ ಬಾಕಿ ಇರುವ ಬಿಲ್ಲುಗಳ ಮೊತ್ತ ರೂ.3224.4353 ಲಕ್ಷಗಳ ಪೈಕಿ ಬಿಡುಗಡೆಗೆ ಲಭ್ಯವಿರುವ ಮೊತ್ತವನ್ನು ಎರಡನೇ ತ್ರೈಮಾಸಿಕದಲ್ಲಿ ಬಿಡುಗಡೆ ಮಾಡಲು ಕೋರಿರುತ್ತಾರೆ.

ಸದರಿ ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 213 ಸಿಎಲ್ಎಸ್ 2014, ಬೆಂಗಳೂರು, ದಿನಾಂಕ: 04–09–2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸ್ವಸಹಾಯದ ಗುಂಪುಗಳ ಸಾಲಗಳ ಮೇಲಿನ ಬಡ್ಡಿ ಸಹಾಯಧನ ಯೋಜನೆಯಲ್ಲಿ ರೂ.500.00 ಲಕ್ಷಗಳನ್ನು (ಐದು ನೂರು ಲಕ್ಷ ರೂಪಾಯಿಗಳು ಮಾತ್ರ) 2014–15ನೇ ಸಾಲಿನ ಎರಡನೇ ತ್ರೈಮಾಸಿಕದಲ್ಲಿ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಲಾಗಿದೆ.

(ರೂ. ಲಕ್ಷಗಳಲ್ಲಿ)

| | |
|---|---|
| ಲೆಕ್ಕಶೀರ್ಷಿಕೆ 2425–00–107–2–41 ಸ್ವಸಹಾಯ ಗುಂಪುಗಳಿಗೆ ಬಡ್ಡಿ ಸಹಾಯಧನ–106–ಸಾಮಾನ್ಯ | 463.00 |
| ಲೆಕ್ಕಶೀರ್ಷಿಕೆ 2425–00–107–2–41 ಸ್ವಸಹಾಯ ಗುಂಪುಗಳಿಗೆ ಬಡ್ಡಿ ಸಹಾಯಧನ 422 ವಿಶೇಷ ಘಟಕ ಯೋಜನೆ | 23.12 |
| ಲೆಕ್ಕಶೀರ್ಷಿಕೆ 2425–00–107–2–41 ಸ್ವಸಹಾಯ ಗುಂಪುಗಳಿಗೆ ಬಡ್ಡಿ ಸಹಾಯಧನ 423 ಗಿರಿಜನ ಉಪಯೋಜನೆ | 13.88 |
| **ಒಟ್ಟು** | **500.00** |

ಈ ಮೊತ್ತವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು) ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು. ಖಜಾನೆಯಿಂದ ಡ್ರಾ ಮಾಡಿದ ಮೊತ್ತವನ್ನು ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿ., ಬೆಂಗಳೂರು ಇಲ್ಲಿ ಠೇವಣಿಸಿ, ಸಹಕಾರ ಸಂಘಗಳ ನಿಬಂಧಕರು ಸದರಿ ಹಣವನ್ನು ಸಂಬಂಧಿಸಿದ ಬ್ಯಾಂಕುಗಳಿಗೆ ಬಿಡುಗಡೆ ಮಾಡುವುದು ಮತ್ತು ಈ ಹಣವನ್ನು ಸಂಬಂಧಿಸಿದ ಫಲಾನುಭವಿಗಳ ಖಾತೆಗೆ ಕೂಡಲೇ ಬಿಡುಗಡೆ ಮಾಡಿ, ಈ ಬಗ್ಗೆ ಬಳಕೆ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 03 ಟಿಎಫ್‌ಪಿ 2014, ದಿನಾಂಕ: 04–04–2014ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಹಾಗೂ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಸಇ 143 ಆಂಆಸ 2014, ದಿನಾಂಕ: 01–09–2014ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

P.R. 825

SC - 25

**ಎಂ. ವೆಂಕಟಸ್ವಾಮಿ,**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಆರ್. ಗೋವಿಂದರಾಜು, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಸನ್ಮಾನ್ಯ ಲೋಕಾಯುಕ್ತರಿಗೆ ವಹಿಸುವ ಬಗ್ಗೆ

**ಓದಲಾಗಿದೆ :**
1) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರುಗಳು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಇವರ ಅ.ಸ.ಪತ್ರ ಸಂಖ್ಯೆ:ಲೋಇ 241 ಸೇಇವಿ 2013 ದಿನಾಂಕ:22–8–2013ರ ಮತ್ತು ಸದನ ಸಮಿತಿಯ ತನಿಖಾ ವರದಿಯ ಶಿಫಾರಸ್ಸು.
2) ಅನಧಿಕೃತ ಟಿಪ್ಪಣಿ ಸಂಖ್ಯೆ: ಲೋಇ:100:ಸೇಇವಿ:2014, ದಿನಾಂಕ: 21–3–2014.

**ಪ್ರಸ್ತಾವನೆ:–**

ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರುಗಳು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ:22–8–2013ರ ಪತ್ರದಲ್ಲಿ ರಾಮನಗರ ಜಿಲ್ಲೆ ಮಾಗಡಿ ಉಪ ವಿಭಾಗದಲ್ಲಿ ಟೆಂಡರು ಕರೆಯುವಲ್ಲಿ ಹಾಗೂ ಕಾಮಗಾರಿ ನಿರ್ವಹಣೆಯಲ್ಲಿ ನಿಯಮಗಳನ್ನು ಉಲ್ಲಂಘಿಸಲಾದ ಪ್ರಕರಣಕ್ಕೆ ಸಂಬಂಧಿಸಿದಂತೆ ಸದನ ಸಮಿತಿಯು ತನಿಖೆ ನಡೆಸಿ ಲೋಕೋಪಯೋಗಿ ಇಲಾಖೆಗೆ ತನಿಖಾ ವರದಿಯನ್ನು ಸಲ್ಲಿಸಿ ತನಿಖಾ ವರದಿಯಲ್ಲಿನ 9 ಅಂಶಗಳ ಬಗ್ಗೆ ಕ್ರಮ ಕೈಗೊಳ್ಳಲು ಶಿಫಾರಸ್ಸು ಮಾಡಿದ್ದು, ಕ್ರಮಸಂಖ್ಯೆ 1ರಲ್ಲಿನ ಈ ಹಿಂದೆ ಲೋಕೋಪಯೋಗಿ ಇಲಾಖೆಯಲ್ಲಿ ಆಂತರಿಕ ಆರ್ಥಿಕ ಸಲಹೆಗಾರರಾಗಿ ಕಾರ್ಯ ನಿರ್ವಹಿಸುತ್ತಿದ್ದ ರಾಜ್ಯ ಲೆಕ್ಕಪತ್ರ ಇಲಾಖೆಯ ಸೇವೆಗೆ ಸೇರಿದ ಶ್ರೀ ಆರ್. ಗೋವಿಂದರಾಜು, ಜಂಟಿ ನಿಯಂತ್ರಕರು ಇವರ ವಿರುದ್ಧ ಶಿಸ್ತುಕ್ರಮ ಜರುಗಿಸಲು ಸಮಿತಿಯ ಶಿಫಾರಸ್ಸು ಮಾಡಿದ್ದು, ಅದರಂತೆ ಶ್ರೀ ಗೋವಿಂಧರಾಜು ಇವರ ವಿರುದ್ಧ ಶಿಸ್ತುಕ್ರಮ ಜರುಗಿಸಲು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಅನಧಿಕೃತ ಟಿಪ್ಪಣಿಯಲ್ಲಿ ದೋಷಾರೋಪಣ ಪಟ್ಟಿಯನ್ನು ಕಳುಹಿಸಿ ಅನುಬಂಧ–3ರಲ್ಲಿ ಗುರ್ತಿಸಿರುವ ದಾಖಲೆಗಳನ್ನು ಪ್ರಕರಣದ ತನಿಖೆಗಾಗಿ ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ರವರಿಗೆ ಕಳುಹಿಸಲಾಗಿದೆಯೆಂದು ಇಲಾಖೆಯು ತಿಳಿಸಿದೆ. ಸಂಬಂಧಿಸಿದ ದಾಖಲಾತಿಗಳಿಲ್ಲದೆ ಇಲಾಖೆ ವಿಚಾರಣೆ ನಡೆಸಲು ಸಾಧ್ಯವಾಗದ ಪ್ರಯುಕ್ತ ಹಾಗೂ ಈ ದಾಖಲಾತಿಗಳನ್ನು ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಇವರಿಗೆ ಸಲ್ಲಿಸಲಾಗಿದೆ ಎಂದು ಲೋಕೋಪಯೋಗಿ ಇಲಾಖೆ ತಿಳಿಸಿರುವುದರಿಂದ, ಈ ಪ್ರಕರಣದ ಬಗ್ಗೆ ಇಲಾಖಾ ವಿಚಾರಣೆಯನ್ನೂ ಸಹ ಮಾನ್ಯ ಕರ್ನಾಟಕ ಲೋಕಾಯುಕ್ತ/ಉಪ ಲೋಕಾಯುಕ್ತರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14–ಎ ರನ್ವಯ ವಹಿಸಲು ಸರ್ಕಾರವು ತೀರ್ಮಾನಿಸಿ ಕೆಳಕಂಡ ಆದೇಶ ನೀಡಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 237 ರಾಲೆಪ 2013 ಬೆಂಗಳೂರು, ದಿನಾಂಕ: 13–8–2014**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14–ಎರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಆರ್. ಗೋವಿಂದರಾಜು, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರ ವಿರುದ್ಧ ಈ

ಆದೇಶಕ್ಕೆ ಲಗತ್ತಿಸಲಾದ ಆರೋಪಗಳ ಕುರಿತು ಪೂರ್ಣ ಪ್ರಮಾಣದ ಇಲಾಖಾ ವಿಚಾರಣೆಯನ್ನು ಸನ್ಮಾನ್ಯ ಲೋಕಾಯುಕ್ತರ ಮೂಲಕ ನಡೆಯಬೇಕೆಂದು ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಲಕ್ಷ್ಮಣ,**

ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

**P.R. 828**

## ಆರ್ಥಿಕ ಸಚಿವಾಲಯ

**ವಿಷಯ :** 1994ರ ಖಜಾನೆ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿನ ವಿಶೇಷ ಅಧಿಕಾರಿ/ತರಬೇತಿ ಸಮನ್ವಯ ಅಧಿಕಾರಿ 2 ಹುದ್ದೆಗಳನ್ನು ಉಪ ನಿರ್ದೇಶಕರ ಹುದ್ದೆಯಾಗಿ ಮರು ಪದನಾಮಗೊಳಿಸುವ ಬಗ್ಗೆ.

**ಓದಲಾಗಿದೆ :**
1) ಸಿಆಸುಇ (ಸೇ.ನಿ) ಟಿಪ್ಪಣಿ ಸಂಖ್ಯೆ: ಸಿಆಸುಇ 80 ಸೇನಿಡಿ 2014 ದಿನಾಂಕ: 19–05–2014ರಲ್ಲಿನ ಸಲಹೆ
2) ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ ಟಿಪ್ಪಣಿ ಸಂಖ್ಯೆ: ಸಂವ್ಯಶಾಇ 129 ಅಶಾರ 2014 ದಿನಾಂಕ:21–06–2014ರಲ್ಲಿನ ಸಲಹೆ
3) ನಿರ್ದೇಶಕರು, ಖಜಾನೆ ಇಲಾಖೆ ಇವರ ಪತ್ರ ಸಂಖ್ಯೆ: ಖನಿ/ಸಿಬ್ಬಂದಿ–(4) ಸಿಆರ್–50/2008–09, ದಿನಾಂಕ: 26–07–2014.

**ಪ್ರಸ್ತಾವನೆ:–**

ನಿರ್ದೇಶಕರು, ಖಜಾನೆ ಇಲಾಖೆ, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಖಜಾನೆ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಾವಳಿಯಲ್ಲಿ ವಿಶೇಷಾಧಿಕಾರಿ/ತರಬೇತಿ ಸಮನ್ವಯ ಅಧಿಕಾರಿ (Special Officer/Training co-ordinator) 2 ಹುದ್ದೆಗಳಿದ್ದು, ಈ ಹುದ್ದೆಯ ವೇತನ ಶ್ರೇಣಿ ಹಾಗೂ ಇಲಾಖೆಯ ಉಪ ನಿರ್ದೇಶಕರ ಹುದ್ದೆಯ ವೇತನ ಶ್ರೇಣಿ ಒಂದೇ ಆಗಿರುವುದರಿಂದ (ವೇತನ ಶ್ರೇಣಿ: 36300–53850) ಸದರಿ 2 ಹುದ್ದೆಗಳನ್ನು ಉಪ ನಿರ್ದೇಶಕರ ವೃಂದಬಲಕ್ಕೆ ಸೇರಿಸಿ ಉಪ ನಿರ್ದೇಶಕರು (ಟಿ.ಎನ್.ಎಂ.ಸಿ) ಮತ್ತು ಉಪ ನಿರ್ದೇಶಕರು (ಆಡಳಿತ, ತರಬೇತಿ ಮತ್ತು ಸಮನ್ವಯ) ಎಂದು ಮರು ಪದನಾಮಗೊಳಿಸಿ ಉಲ್ಲೇಖ(1) ಮತ್ತು (2) ರಲ್ಲಿನ ಅನುಕ್ರಮವಾಗಿ ಸಿಆಸುಇ (ಸೇ.ನಿ) ಹಾಗೂ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ, ಖಜಾನೆ ಇಲಾಖೆ ವೃಂದ ಮತ್ತು ನಿಯಮಗಳ ಪರಿಷ್ಕರಣೆಗೆ ನೀಡಿರುವ ಸಲಹೆಯ ಹಿನ್ನೆಲೆಯಲ್ಲಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 181 ಆಖಇ 2014 ಬೆಂಗಳೂರು, ದಿನಾಂಕ:11–09–2014**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಖಜಾನೆ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಾವಳಿಯಲ್ಲಿ ಇರುವ ವಿಶೇಷಾಧಿಕಾರಿ/ತರಬೇತಿ ಸಮನ್ವಯ ಅಧಿಕಾರಿ 2 ಹುದ್ದೆಗಳ ವೇತನ ಶ್ರೇಣಿಗಳು ಉಪ ನಿರ್ದೇಶಕರು ಖಜಾನೆ ಇಲಾಖೆ, ಹುದ್ದೆಯ ವೇತನ ಶ್ರೇಣಿಗೆ ಸಮಾನವಾಗಿರುವುದರಿಂದ ಈ ಎರಡು ಹುದ್ದೆಗಳನ್ನು ಉಪ ನಿರ್ದೇಶಕರು (ಟಿ.ಎನ್.ಎಂ.ಸಿ) ಮತ್ತು ಉಪ ನಿರ್ದೇಶಕರು (ಆಡಳಿತ, ತರಬೇತಿ ಮತ್ತು ಸಮನ್ವಯ) ಎಂದು ಮರು ಪದನಾಮಗೊಳಿಸಿ ಈ ಎರಡು ಹುದ್ದೆಗಳನ್ನು ಉಪ ನಿರ್ದೇಶಕರ ವೃಂದದ ಜೊತೆ ಸೇರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಲಕ್ಷ್ಮಣ,**

ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

**P.R. 829**

## ಒಳಾಡಳಿತ ಸಚಿವಾಲಯ

### ಸುತ್ತೋಲೆ

**ಸಂಖ್ಯೆ: ಹೆಚ್‌ಡಿ 417 ಎಸ್‌ಎಸ್‌ಟಿ 2014 ಬೆಂಗಳೂರು, ದಿನಾಂಕ: 25–07–2014**

ಕರ್ನಾಟಕ ರಾಜ್ಯದ 02–ಚಿಕ್ಕೋಡಿ–ಸಡಲಗ, 93–ಬಳ್ಳಾರಿ (ಎಸ್‌ಟಿ) ಮತ್ತು 115–ಶಿಕಾರಿಪುರ ವಿಧಾನಸಭಾ ಕ್ಷೇತ್ರಗಳ ಉಪ ಚುನಾವಣೆಯು ದಿನಾಂಕ: 21/08/2014 ಹಾಗೂ ಮತ ಎಣಿಕೆ ಕಾರ್ಯವು ದಿನಾಂಕ: 25/08/2014ರಂದು ನಡೆಯಲಿದ್ದು, ಚುನಾವಣೆ ಸಮಯದಲ್ಲಿ ಈ ಕೆಳಕಂಡ ಕ್ರಮಗಳನ್ನು ಚಾಚೂತಪ್ಪದೇ ಪಾಲಿಸತಕ್ಕದ್ದು.

1. ಸಂಬಂಧಪಟ್ಟ ಜಿಲ್ಲೆಗಳ ಜಿಲ್ಲಾಧಿಕಾರಿಗಳು, ಜಿಲ್ಲಾ ಪೊಲೀಸ್ ಅಧೀಕ್ಷಕರುಗಳು ಜೊತೆಗೂಡು ಅವರವರ ಜಿಲ್ಲೆಗಳಲ್ಲಿನ ಸೂಕ್ಷ್ಮ ಹಾಗೂ ಅತೀ ಸೂಕ್ಷ್ಮ ಮತಗಟ್ಟೆಗಳನ್ನು ಗುರುತಿಸಿ ಕೂಡಲೇ ಪಟ್ಟಿಯನ್ನು ಚುನಾವಣಾ ಆಯೋಗಕ್ಕೆ ಕಳುಹಿಸಿತಕ್ಕದ್ದು.
2. ಸೂಕ್ಷ್ಮ ಹಾಗೂ ಅತೀ ಸೂಕ್ಷ್ಮ ಮತಗಟ್ಟೆಗಳಿಗೆ ಸೂಕ್ತ ಭದ್ರತಾ ವ್ಯವಸ್ಥೆಗಳನ್ನು ಮಾಡತಕ್ಕದ್ದು.
3. ಸೂಕ್ಷ್ಮ ಹಾಗೂ ಅತೀ ಸೂಕ್ಷ್ಮ ಮತಗಟ್ಟೆಗಳ ಭದ್ರತೆಯನ್ನು ಪೊಲೀಸ್ ಸಿಬ್ಬಂದಿಯಿಂದಲೇ ಮಾಡತಕ್ಕದ್ದು ಹಾಗೂ ಗೃಹ ರಕ್ಷಕ ದಳದ ಸಿಬ್ಬಂದಿಗಳನ್ನು ನೇಮಿಸಬಾರದು.

4. ಮೂರಕ್ಕಿಂತ ಹೆಚ್ಚು ಸಾಮಾನ್ಯ ಮತಗಟ್ಟೆಗಳು ಒಂದೇ ಸ್ಥಳದಲ್ಲಿದ್ದರೆ, ಅವುಗಳಿಗೆ ಬಂದೋಬಸ್ತ್ ನೀಡಲು ಕನಿಷ್ಠ ಒಬ್ಬ ಮುಖ್ಯ ಪೇದೆ ಹಾಗೂ ಅವರ ಜೊತೆ ಗೃಹ ರಕ್ಷಕ ದಳದ ಸಿಬ್ಬಂದಿ ಅಥವಾ ಪೊಲೀಸರನ್ನು ಒದಗಿಸುವುದು. ಗೃಹ ರಕ್ಷಕ ದಳದವರನ್ನು ಎಲ್ಲಾ ಸಾಮಾನ್ಯ ಮತಗಟ್ಟೆಗಳಲ್ಲಿ ನೇಮಿಸಲು ಕ್ರಮ ವಹಿಸುವುದು.

5. ಜಿಲ್ಲಾ ಪೊಲೀಸ್ ಅಧೀಕ್ಷಕರು ಅವಶ್ಯಕತೆಗೆ ತಕ್ಕಂತೆ ಸಂಚಾರಿ ದಳಗಳನ್ನು ರಚಿಸಬೇಕು. ಚುನಾವಣಾ ಪ್ರಕ್ರಿಯೆ ನಡೆಯುವಾಗ ಯಾವುದಾದರೂ ಮತಗಟ್ಟೆಯಲ್ಲಿ ಜನಸಂಚಾರ, ದಟ್ಟಣೆ ಅಥವಾ ಯಾವುದೇ ಅಹಿತಕರ ಘಟನೆ ನಡೆಯುವ ಪ್ರಸಂಗವುಂಟಾದಲ್ಲಿ ಈ ಸಂಚಾರಿ ದಳಗಳನ್ನು ನಿಯೋಜಿಸಿ ಅಂತಹ ಮತಗಟ್ಟೆಗಳಿಗೆ ಸೂಕ್ತ ಭದ್ರತೆ ನೀಡತಕ್ಕದ್ದು.

6. ಸರ್ಕಲ್ ಪೊಲೀಸ್ ಇನ್ಸ್‌ಪೆಕ್ಟರ್, ಡಿವೈಎಸ್‌ಪಿ ಹಾಗೂ ಹೆಚ್ಚುವರಿ ಪೊಲೀಸ್ ಅಧೀಕ್ಷಕರುಗಳು ಇವರುಗಳು ತಮ್ಮ ಸ್ವಂತ ಊರು/ಜಿಲ್ಲೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದರೆ, ಅವರನ್ನು ಕೂಡಲೇ ಅಲ್ಲಿಂದ ಬೇರೆ ಕಡೆಗೆ ವರ್ಗಾವಣೆ ಮಾಡತಕ್ಕದ್ದು.

7. ಚುನಾವಣಾ ಪೂರ್ವದಲ್ಲಿ ಶಸ್ತ್ರಾಸ್ತ್ರ ಪರವಾನಗಿ ಹೊಂದಿರುವವರು ಶಸ್ತ್ರಾಸ್ತ್ರಗಳನ್ನು ತಕ್ಷಣ ಠೇವಣಿ ಇಡುವಂತೆ ನಿರ್ದೇಶಿಸುವುದು. ಈ ಸಂಬಂಧ ಸಂಪೂರ್ಣ ಮಾಹಿತಿ ಗಣಕಯಂತ್ರದಲ್ಲಿ ಲಭ್ಯವಿರುವಂತೆ ನೋಡಿಕೊಳ್ಳುವುದು.

8. ಚುನಾವಣಾ ವೇಳೆಯಲ್ಲಿ ಹಾಗೂ ಚುನಾವಣಾ ಪೂರ್ವದಲ್ಲಿ ಜಿಲ್ಲೆಯಲ್ಲಿರುವ ಛತ್ರ, ಸಂಘ–ಸಂಸ್ಥೆಗಳು ಹಾಗೂ ಇತ್ಯಾದಿಗಳ ಮೇಲೆ ಕಟ್ಟುನಿಟ್ಟಿನ ನಿಗಾ ವಹಿಸುವುದು ಹಾಗೂ ಅವರುಗಳು ಕೆಲಸ ನಿರ್ವಹಣೆ ಮೇಲೂ ಸಹ ಗುಪ್ತಚರ ಅಧಿಕಾರಿಗಳಿಂದ ಮಾಹಿತಿ ತರಿಸಿ ನಿಗಾ ವಹಿಸುವುದು.

9. ಚುನಾವಣಾ ಪ್ರಕ್ರಿಯೆಯಲ್ಲಿ ಅಡಚಣೆ ಅಥವಾ ಯಾವುದೇ ತರಹದ ತೊಂದರೆಯನ್ನು ಉಂಟು ಮಾಡುವ ಸಾಧ್ಯತೆ ಇರುವ ಸಮಾಜಘಾತುಕ ವ್ಯಕ್ತಿಗಳ ಮೇಲೆ ತೀವ್ರ ನಿಗಾ ವಹಿಸುವುದು. ಅದೇ ರೀತಿ ವಿವಿಧ ಕಾಯ್ದೆ/ಕಾನೂನಿನಡಿಯಲ್ಲಿ ಕೆಲವರನ್ನು ಮುಂಜಾಗ್ರತಾ ಕ್ರಮವಾಗಿ ಬಂಧಿಸಿ ಕ್ರಮ ಕೈಗೊಳ್ಳುವುದು (Preventive Detention) ಅವಶ್ಯವಿದ್ದಲ್ಲಿ ಗಡೀಪಾರು ಮಾಡುವುದು.

10. ಜಿಲ್ಲೆಯಲ್ಲಿರುವ ಸಮಾಜಘಾತುಕ ವ್ಯಕ್ತಿಗಳ ಮೇಲೆ ವಿವಿಧ ಕಾನೂನಿಡಿಯಲ್ಲಿ ಜಾರಿಯಾಗದ ಬಾಕಿ ಇರುವ ಜಾಮೀನುರಹಿತ ವಾರಂಟ್‌ನ್ನು ಜಾರಿ ಮಾಡಿ ಸೂಕ್ತ ಕ್ರಮ ಜರುಗಿಸುವುದು.

11. ಚುನಾವಣಾ ಸಮಯದಲ್ಲಿ ಗಡಿ ಪ್ರದೇಶಗಳನ್ನು ಕಡ್ಡಾಯವಾಗಿ ಸೀಲ್ ಮಾಡುವುದು.

12. ಗಡಿ ಪ್ರದೇಶಗಳಲ್ಲಿ ಚೆಕ್‌ಪೋಸ್ಟ್‌ನ್ನು ಸ್ಥಾಪಿಸಿ ಗಡಿಪ್ರದೇಶಗಳಲ್ಲಿ ಓಡಾಡುವ ವಾಹನಗಳ ಹಾಗೂ ಜನರ ಚಲನವಲನಗಳ ಮೇಲೆ ಕಣ್ಗಾವಲಿರಿಸುವುದು.

13. ಜಿಲ್ಲಾ ಪೊಲೀಸ್ ಅಧೀಕ್ಷಕರ ಕಛೇರಿಯಲ್ಲಿ ಒಂದು ಕಂಟ್ರೋಲ್ ರೂಂನ್ನು ಸ್ಥಾಪಿಸಿ ಅದರ ದೂರವಾಣಿ ಸಂಖ್ಯೆ ಮತ್ತು ಅಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಯ ಹೆಸರು, ಹುದ್ದೆ, ದೂರವಾಣಿ ಸಂಖ್ಯೆ, ಮೊಬೈಲ್ ಸಂಖ್ಯೆ ಬಗ್ಗೆ ಚುನಾವಣಾ ಆಯೋಗಕ್ಕೆ ಹಾಗೂ ಸರ್ಕಾರಕ್ಕೆ (ಒಳಾಡಳಿತ ಇಲಾಖೆ) ವಿವರಗಳನ್ನು ಕಳುಹಿಸತಕ್ಕದ್ದು. ಸದರಿ ಕಂಟ್ರೋಲ್ ರೂಂನಲ್ಲಿ ಪ್ರತ್ಯೇಕವಾದ ದೂರು ಅರ್ಜಿ ವಹಿಯನ್ನು ನಿರ್ವಹಿಸತಕ್ಕದ್ದು. ಯಾರಾದರೂ ದೂರು ಸಲ್ಲಿಸಿದಲ್ಲಿ 24 ಗಂಟೆಗಳೊಳಗಾಗಿ ಅವರಿಗೆ ಉತ್ತರ ನೀಡತಕ್ಕದ್ದು. ಪ್ರತಿ ವಾರದ ಕೊನೆಯಲ್ಲಿ ಸ್ವೀಕರಿಸಿದ ಅರ್ಜಿಗಳು ಹಾಗೂ ವಿಲೇಯಾದ ಅರ್ಜಿಗಳ ಬಗ್ಗೆ ಅಂಕಿ–ಅಂಶಗಳನ್ನು ಜಿಲ್ಲಾಧಿಕಾರಿ ಹಾಗೂ ಚುನಾವಣಾ ವೀಕ್ಷಕರಿಗೆ ಕಡ್ಡಾಯವಾಗಿ ಸಲ್ಲಿಸತಕ್ಕದ್ದು. ದೂರು ಅರ್ಜಿಗೆ ಸಂಬಂಧಿಸಿದಂತೆ ಕ್ರಮ ಕೈಗೊಳ್ಳದೇ ಇದ್ದಲ್ಲಿ ಅದನ್ನು ರಾಜ್ಯ ಚುನಾವಣಾ ಆಯೋಗವು ಗಂಭೀರವಾಗಿ ಪರಿಗಣಿಸುವುದು.

14. ಚುನಾವಣಾ ವೀಕ್ಷಕರಿಗೆ ಸೂಕ್ತ ರಕ್ಷಣೆ ನೀಡಲು ಕ್ರಮ ಜರುಗಿಸುವುದು. ಅವರು ತಂಗಿರುವ ಸ್ಥಳದಲ್ಲಿ ಅವರಿಗೆ ರಕ್ಷಣೆ ಹಾಗೂ ಸ್ವತ: ಅವರಿಗೆ ಕನಿಷ್ಠ ಒಬ್ಬ ಅಂಗರಕ್ಷಕನನ್ನು ಒದಗಿಸುವುದು.

15. ಚುನಾವಣಾ ವೇಳೆಯಲ್ಲಿ ಕಳ್ಳಭಟ್ಟಿ ಸಾರಾಯಿ, ಸೇಂದಿ ಹಾಗೂ ಸಾರಾಯಿ ಮಾರಾಟ ಆಗದಂತೆ ನೋಡಿಕೊಳ್ಳತಕ್ಕದ್ದು. ಜೊತೆಗೆ ಗಾಂಜಾ ಹಾಗೂ ನಾರ್ಕೋಟಿಕ್ ಡ್ರಗ್ಸ್‌ಗಳ ಮಾರಾಟ, ಕಳ್ಳಸಾಗಾಣೆ ಮೇಲೆ ತೀವ್ರ ನಿಗಾ ವಹಿಸುವುದು ಹಾಗೂ ಕಠಿಣ ಕ್ರಮ ತೆಗೆದುಕೊಳ್ಳುವುದು. ಚುನಾವಣಾ ವೇಳೆ ಹದ್ದುಬಸ್ತಿನ ಹೊರಗಡೆಯೂ ಸಹ ವಾಹನಗಳ ಹಾಗೂ ಜನರ ಚಲನವಲನಗಳ ಬಗ್ಗೆ ಸೂಕ್ಷ್ಮ ನಿಗಾ ವಹಿಸತಕ್ಕದ್ದು.

16. ಕ್ರಿಮಿನಲ್ ಅಪರಾಧದ ಹಿನ್ನೆಲೆಯುಳ್ಳ ವ್ಯಕ್ತಿಗಳು, ಗೂಂಡಾ ಚಟುವಟಿಕೆಗಳಲ್ಲಿ ಭಾಗಿಯಾಗಿರುವವರು, ಸಮಾಜಘಾತುಕ ವ್ಯಕ್ತಿಗಳು, ವೃತ್ತಿನಿರತ ಮಾಫಿಯಾಗಳ ಬಗ್ಗೆ ತೀವ್ರ ನಿಗಾ ಇಡುವುದು.

17. ಚುನಾವಣೆಗೆ ಸಂಬಂಧಿಸಿದಂತೆ ಯಾವುದೇ ದೂರು ಬಂದಲ್ಲಿ ಅದನ್ನು ಕೂಡಲೇ ಪರಿಶೀಲಿಸಿ ಅದರ ಬಗ್ಗೆ ವಿಚಾರಣೆ ಮಾಡಿ ಅದನ್ನು ವಿಲೇ ಮಾಡುವುದು. ದೂರುದಾರರಿಗೆ ಇದರ ಬಗ್ಗೆ ಹಿಂಬರಹವನ್ನು ನೀಡಿ ಪ್ರತಿಯನ್ನು ಮುಖ್ಯ ಚುನಾವಣಾಧಿಕಾರಿ, ಕರ್ನಾಟಕ ಸರ್ಕಾರ ಹಾಗೂ ಒಳಾಡಳಿತ ಇಲಾಖೆಯ ಹೆಚ್ಚುವರಿ ಮುಖ್ಯ ಕಾರ್ಯದರ್ಶಿಯವರಿಗೆ ಸಲ್ಲಿಸುವುದು.

18. ಚುನಾವಣೆಯ ಸಮಯದಲ್ಲಿ ಹಾಗೂ ಚುನಾವಣೆಗೆ ಸಂಬಂಧಿಸಿದಂತೆ ಯಾವುದೇ ಕ್ರಿಮಿನಲ್ ಪ್ರಕರಣ ದಾಖಲಾದಲ್ಲಿ ಅಂತಹ ಪ್ರಕರಣಗಳಲ್ಲಿ ಸರ್ಕಾರಿ ಅಭಿಯೋಜಕರುಗಳು ಆರೋಪಿಗಳ ಜಾಮೀನು ಅರ್ಜಿಯನ್ನು ವಿರೋಧಿಸಿ ಜಾಮೀನು ಸಿಗದ ಹಾಗೆ ನ್ಯಾಯಾಲಯದಲ್ಲಿ ವಾದ ಮಂಡಿಸುವುದು.

19. ತಮ್ಮ ತಮ್ಮ ಜಿಲ್ಲೆಗಳಲ್ಲಿ ಅಲ್ಪಸಂಖ್ಯಾತರು, ಹಿಂದುಳಿದ ವರ್ಗದವರು ವಾಸಿಸುವ ಸ್ಥಳಗಳನ್ನು ಗುರುತಿಸಿ ಅಂತಹ ಸ್ಥಳಗಳ ಮೇಲೆ ಸೂಕ್ತ ನಿಗಾ ವಹಿಸಿ ಅವಶ್ಯಕತೆಗೆ ಅನುಗುಣವಾಗಿ ಹೆಚ್ಚಿನ ರಕ್ಷಣೆಯನ್ನು ಒದಗಿಸಿ ಅವರುಗಳಿಗೆ ಯಾವುದೇ ಭಯ–ಭೀತಿ ಇಲ್ಲದೆ ಮತ ಚಲಾಯಿಸಲು ಅನುವು ಮಾಡಿಕೊಡತಕ್ಕದ್ದು.

20. ಅಂತರ್ ರಾಜ್ಯ ಗಡಿ ಭಾಗಗಳಲ್ಲಿ ಹೆಚ್ಚಿನ ನಿಗಾ ವಹಿಸುವುದು, ಜಿಲ್ಲಾ ದಂಡಾಧಿಕಾರಿಗಳು ಶಸ್ತ್ರಾಸ್ತ್ರ ಕಾಯಿದೆ ಅಡಿಯಲ್ಲಿ ಲೈಸೆನ್ಸ್‌ದಾರರು ತಮ್ಮ ತಮ್ಮ ಆಯುಧಗಳನ್ನು ಡೆಪಾಸಿಟ್ ಮಾಡಿರುವ ಬಗ್ಗೆ ದೃಢಪಡಿಸಿಕೊಳ್ಳತಕ್ಕದ್ದು ಹಾಗೂ ಶಸ್ತ್ರಾಸ್ತ್ರ ಮಾರಾಟಗಾರರು/ಡೀಲರ್ಸ್/ರಿಪೇರಿ ಮಾಡುವವರ ಮಳಿಗೆ/ಅಂಗಡಿಗಳನ್ನು ತಪಾಸಣೆ ಮಾಡುವುದು.

21. ಚುನಾವಣೆಯ ಸಮಯದಲ್ಲಿ ಸಾರ್ವಜನಿಕ ಕಾನೂನು ಮತ್ತು ಸುವ್ಯವಸ್ಥೆಗೆ ಭಂಗ ಬಾರದಂತೆ ಸುಗಮವಾಗಿ ನಡೆಸುವಲ್ಲಿ ಸೂಕ್ತ ಕ್ರಮ ಕೈಗೊಳ್ಳತಕ್ಕದ್ದು.
22. ಭದ್ರತೆ ಹಾಗೂ ಕಾನೂನು ಸುವ್ಯವಸ್ಥೆಗೆ, ಸಾರ್ವಜನಿಕ ನೆಮ್ಮದಿಗೆ ಭಂಗ ಉಂಟಾಗುವ ಸನ್ನಿವೇಶಗಳಲ್ಲಿ ಭಾರತೀಯ ದಂಡ ಸಂಹಿತೆಯಡಿಯಲ್ಲಿ ಸೆಕ್ಯೂರಿಟಿ ಸೆಕ್ಷನ್ಸ್‌ಗಳು ದಾಖಲಿಸಿದ್ದಲ್ಲಿ, ಅಂತಹುಗಳ ಮೇಲೆ ಜಿಲ್ಲಾ ದಂಡಾಧಿಕಾರಿಗಳು/ಉಪವಿಭಾಗೀಯ/ತಾಲ್ಲೂಕು ದಂಡಾಧಿಕಾರಿಗಳು ಕೂಡಲೇ ನಿಯಮಾನುಸಾರ ಕ್ರಮ ಜರುಗಿಸತಕ್ಕದ್ದು.
23. ಚುನಾವಣೆ ಮುಗಿಯವವರೆಗೆ ಯಾವುದೇ ರೌಡಿಶೀಟ್‌ನ್ನು ಮುಕ್ತಾಯ ಮಾಡಬಾರದು.
24. ಚುನಾವಣೆ ಸಂಬಂಧ ಪ್ರಮುಖ ಕಾರ್ಯಕ್ರಮಗಳ ವಿಡಿಯೋ ತೆಗೆದುಕೊಳ್ಳುವುದು.

ಈ ಸೂಚನೆಗಳನ್ನು ಯಾವುದೇ ಲೋಪಗಳಿಗೆ ಅವಕಾಶ ನೀಡದಂತೆ ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

**ಎಸ್.ಕೆ. ಪಟ್ಟನಾಯಕ್,**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ
ಒಳಾಡಳಿತ ಇಲಾಖೆ

**P.R. 832**
**SC-50**

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಸ್.ಆರ್. ಪಾಟೀಲ್, ಕಾನೂನು ಅಧಿಕಾರಿ (ಕಿರಿಯ), ಕಾನೂನು ಅಧಿಕಾರಿ (ಹಿರಿಯ)ರವರ ಕಛೇರಿ, ಕಲಬುರಗಿ ವಲಯ, ಕಲಬುರಗಿ ಇವರ ವಿರುದ್ಧ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ :**
1) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಆದೇಶ ಸಂಖ್ಯೆ:ಡಿಪಿಎನ್/ ಕೇಂಸ:ಜಿ–12:2007–08, ದಿನಾಂಕ: 26–02–2008.
2) ವಿಚಾರಣಾಧಿಕಾರಿಯ ವಿಚಾರಣಾ ವರದಿಯ ದಿನಾಂಕ: 28–04–2008.
3) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಆದೇಶ ಸಂಖ್ಯೆ: ಡಿಪಿಎನ್: ಕೇಂಸ:ಜಿ–12:2007–08, ದಿನಾಂಕ:15–09–2008.
4) ವಿಚಾರಣಾಧಿಕಾರಿಯ ಮರು ವಿಚಾರಣಾ ವರದಿಯ ದಿನಾಂಕ: 28–04–2008.
5) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಪತ್ರದ ಸಂಖ್ಯೆ: ಡಿಪಿಎನ್: ಕೇಂಸ:ಜಿ–12:2007–08, ದಿನಾಂಕ: 30–06–2014.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮಸಂಖ್ಯೆ (1)ರಲ್ಲಿನ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಆದೇಶದಲ್ಲಿ ಶ್ರೀ ಎಸ್.ಆರ್.ಪಾಟೀಲ, ಕಾನೂನು ಅಧಿಕಾರಿ (ಕಿರಿಯ) ಕಾನೂನು ಅಧಿಕಾರಿ (ಹಿರಿಯ)ರವರ ಕಛೇರಿ, ಕಲಬುರಗಿ ವಲಯ, ಕಲಬುರಗಿ ಇವರು ಈ ಹಿಂದೆ ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಜಮಖಂಡಿ ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಸಮಯದಲ್ಲಿ ಸದರಿ ನ್ಯಾಯಾಲಯದಲ್ಲಿ ದಾಖಲಾಗಿದ್ದ ಸಿ.ಸಿ.ನಂ:58:2007ರಲ್ಲಿ ಪ್ರಕರಣವನ್ನು ಸರಿಯಾಗಿ ನಿರ್ವಹಿಸದೆ, ಅಧಿಕಾರವನ್ನು ದುರುಪಯೋಗ ಪಡಿಸಿಕೊಂಡಿರುವ ಬಗ್ಗೆ ಮತ್ತು ಸದರಿ ಪ್ರಕರಣದ ಪಿರ್ಯಾದುದಾರರಾದ ಶ್ರೀಮತಿ ಕಲಾವತಿ ಉರುಫ್ ಲಕ್ಷ್ಮೀ ಕೋಂ ಪಾಟೀಲ ಇವರಿಗೆ ತೊಂದರೆ ಕೊಟ್ಟು, ವಿವಾಹ ವಿಚ್ಛೇದನ ಪಡೆದುಕೊಳ್ಳುವಂತೆ ಸೂಚಿಸಿ ಅಧಿಕಾರಿಯು ಕರ್ತವ್ಯ ನಿರ್ವಹಣೆಯ ವ್ಯಾಪ್ತಿಯನ್ನು ಮೀರಿ ವರ್ತಿಸಿದ ಹಾಗೂ ಅವರ ಗಂಡನಿಗೆ 2ನೇ ಮದುವೆ ಮಾಡಿಸುವಲ್ಲಿ ಸಹಕರಿಸಿದ್ದು, ಸಂಬಂಧವಿಲ್ಲದ ಹಾಗೂ ಬೇರೆಯವರ ವೈಯಕ್ತಿಕ ವಿಚಾರದಲ್ಲಿ ಅನಾವಶ್ಯಕವಾಗಿ ಮಧ್ಯ ಪ್ರವೇಶ ಮಾಡಿ ಅಧಿಕಾರವನ್ನು ದುರುಪಯೋಗಪಡಿಸಿಕೊಂಡು ಬೇಜವಾಬ್ದಾರಿಯಿಂದ ವರ್ತಿಸಿ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು, 1966 ನಿಯಮ 3(1)ರ ಉಪ ನಿಯಮ (i), (ii) ಮತ್ತು (iii) ನ್ನು ಸ್ಪಷ್ಟವಾಗಿ ಉಲಂಘಿಸಿರುವ 02 ಆರೋಪಗಳಿಗೆ ಸಂಬಂಧಿಸಿದಂತೆ ಆರೋಪಿತ ಅಧಿಕಾರಿಯನ್ನು ವಿಚಾರಣೆಗೊಳಪಡಿಸಲು ಅಂದಿನ ನಿರ್ದೇಶಕರು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯನ್ನು ನೇಮಿಸಿ ಇಲಾಖಾ ವಿಚಾರಣೆ ನಡೆಸಲು ಆದೇಶಿಸಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (2)ರಲ್ಲಿನ ದಿನಾಂಕ:30–06–2008ರ ವಿಚಾರಣಾ ವರದಿಯಲ್ಲಿ ಪ್ರಕರಣದ ವಿಚಾರಣಾಧಿಕಾರಿಯು ಆರೋಪಿತ ಅಧಿಕಾರಿಯವರ ಮೇಲಿನ ಎಲ್ಲಾ ಆಪಾದನೆಗಳು ಸಾಬೀತಾಗಿವೆ ಎಂಬ ವರದಿಯನ್ನು ನೀಡಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (3)ರಲ್ಲಿನ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ದಿನಾಂಕ: 15–09–2008ರ ಆದೇಶದಲ್ಲಿ ಮೇಲೆ ಓದಲಾದ ಕ್ರಮಸಂಖ್ಯೆ (2)ರಲ್ಲಿನ ವಿಚಾರಣಾ ವರದಿಯನ್ನು ಪರಿಶೀಲಿಸಿದ ಶಿಸ್ತು ಪ್ರಾಧಿಕಾರರಾಗಿದ್ದ ಅಂದಿನ ನಿರ್ದೇಶಕರು, ಸದರಿ ಪ್ರಕರಣದ ಸಾಕ್ಷ್ಯಾಧಾರಗಳನ್ನು ಪರಿಶೀಲಿಸಿ ಅವಶ್ಯವಿದ್ದಲ್ಲಿ/ಲಭ್ಯವಿದ್ದಲ್ಲಿ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸಿಕೊಂಡು ಸಾಕ್ಷ್ಯಾಧಾರಗಳನ್ನು ದಾಖಲಿಸಿಕೊಂಡು ಮರುವಿಚಾರಣೆ ನಡೆಸಿ ವರದಿ ಸಲ್ಲಿಸಲು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯನ್ನು ನೇಮಿಸಿ ಆದೇಶಿಸಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ(4)ರಲ್ಲಿನ ದಿನಾಂಕ:28–04–2010ರ ಮರು ವಿಚಾರಣಾ ವರದಿಯಲ್ಲಿ ಪ್ರಕರಣದ ವಿಚಾರಣಾಧಿಕಾರಿಯು ಆರೋಪಿತ ಅಧಿಕಾರಿಯಾದ ಶ್ರೀ ಎಸ್.ಆರ್. ಪಾಟೀಲ್ ಇವರ ಮೇಲೆ ಹೊರಿಸಿರುವ ಎಲ್ಲಾ ದೋಷಾರೋಪಣೆಗಳನ್ನು ಸಾಬೀತುಪಡಿಸುವಲ್ಲಿ ಶಿಸ್ತು ಪ್ರಾಧಿಕಾರವು ವಿಫಲವಾಗಿದೆ ಎಂಬ ವರದಿಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (5)ರಲ್ಲಿನ ದಿನಾಂಕ: 30–06–2014ರ ಪತ್ರದೊಡನೆ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರುರವರು ಮೇಲೆ ಓದಲಾದ ಕ್ರಮಸಂಖ್ಯೆ (4)ರಲ್ಲಿನ ದಿನಾಂಕ:28–04–2010ರ ಮರು ವಿಚಾರಣಾ ವರದಿಯನ್ನು ಲಗತ್ತಿಸಿ, ಮುಂದಿನ ಕ್ರಮಕ್ಕಾಗಿ ಸರ್ಕಾರಕ್ಕೆ ಕಳುಹಿಸಿರುತ್ತಾರೆ.

ಸದರಿ ಮರು ವಿಚಾರಣಾ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ಎಸ್.ಆರ್. ಪಾಟೀಲ್‌ರವರನ್ನು ಆರೋಪಗಳಿಂದ ದೋಷಮುಕ್ತಗೊಳಿಸಲು ತೀರ್ಮಾನಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 325 ಪಿಪಿಇ 2014, ಬೆಂಗಳೂರು, ದಿನಾಂಕ: 23ನೇ ಅಕ್ಟೋಬರ್ 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಎಸ್.ಆರ್. ಪಾಟೀಲ್, ಕಾನೂನು ಅಧಿಕಾರಿ (ಕಿರಿಯ), ಕಾನೂನು ಅಧಿಕಾರಿ (ಹಿರಿಯ)ರವರ ಕಛೇರಿ, ಕಲಬುರಗಿ ವಲಯ, ಕಲಬುರಗಿ ಇವರು ಈ ಹಿಂದೆ ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಜಮಖಂಡಿ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಸಮಯದಲ್ಲಿ ದಾಖಲಾಗಿದ್ದ ಸಿ.ಸಿ.ನಂ.58/2007ರ ಪ್ರಕರಣದ ನಿರ್ವಹಣೆಯಲ್ಲಿ ಕರ್ತವ್ಯಲೋಪ ಎಸಗಿದ್ದಾರೆಂಬ ಆರೋಪಗಳಿಂದ ದೋಷಮುಕ್ತಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ದೇವೆಂದ್ರಪ್ಪ ಕಟ್ಟಿಮನಿ,**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು ಬಿ)

P.R. 835

## ಒಳಾಡಳಿತ ಸಚಿವಾಲಯ

**ವಿಷಯ :** ನ್ಯಾಯಮೂರ್ತಿ ಶ್ರೀ ಆರ್.ಜಿ. ವೈದ್ಯನಾಥ ವಿಚಾರಣಾ ಆಯೋಗಕ್ಕೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1) ಅಧಿಸೂಚನೆ ಸಂಖ್ಯೆ:ಹೆಚ್‌ಡಿ 4 ಪಿಸಿಇ 2012 ದಿನಾಂಕ 09/03/2012
2) ಅಧಿಸೂಚನೆ ಸಂಖ್ಯೆ:ಹೆಚ್‌ಡಿ 4 ಪಿಸಿಇ 2012 ದಿನಾಂಕ 29/09/2014
3) ಕಾರ್ಯದರ್ಶಿ, ನ್ಯಾಯಮೂರ್ತಿ ಶ್ರೀ ಆರ್.ಜಿ.ವೈದ್ಯನಾಥ ವಿಚಾರಣಾ ಆಯೋಗರವರ ಪತ್ರ ಸಂಖ್ಯೆ: ಆರ್‌ಜಿವಿಸಿ/205/2014, ದಿನಾಂಕ: 01/09/2014

**ಪ್ರಸ್ತಾವನೆ:–**

ದಿನಾಂಕ: 02/03/2012ರಂದು ಸಿಟಿ ಸಿವಿಲ್ ನ್ಯಾಯಾಲಯ, ಬೆಂಗಳೂರು ಇಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೊಲೀಸರ ನಡುವೆ ನಡೆದ ಘರ್ಷಣೆಯ ಕುರಿತು ಸತ್ಯಾ ಸತ್ಯತೆಯನ್ನು ತಿಳಿದುಕೊಳ್ಳಲು ನ್ಯಾಯಮೂರ್ತಿ ಶ್ರೀ ಆರ್.ಜಿ. ವೈದ್ಯನಾಥ, ನಿವೃತ್ತ ನ್ಯಾಯಾಧೀಶರು ಇವರ ನೇತೃತ್ವದಲ್ಲಿ ಏಕ ಸದಸ್ಯ ವಿಚಾರಣಾ ಆಯೋಗವನ್ನು ಮೇಲೆ (1)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ರಚಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಶ್ರೀ ಆರ್.ಜಿ.ವೈದ್ಯನಾಥ ವಿಚಾರಣಾ ಆಯೋಗದ ಅವಧಿಯನ್ನು ದಿನಾಂಕ: 31/10/2014ರವರೆಗೆ ವಿಸ್ತರಿಸಲಾಗಿದೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಕಾರ್ಯದರ್ಶಿ, ನ್ಯಾಯಮೂರ್ತಿ ಆರ್.ಜಿ. ವೈದ್ಯನಾಥ ವಿಚಾರಣಾ ಆಯೋಗ ಅವರು ರೂ.20,00,000/– ಗಳ ಅನುದಾನ ಮಂಜೂರು ಮಾಡಲು ಕೋರಿದ್ದು, ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 4 ಪಿಸಿಇ 2012 ಬೆಂಗಳೂರು ದಿನಾಂಕ: 10/10/2014**

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ನ್ಯಾಯಮೂರ್ತಿ ಶ್ರೀ ಆರ್.ಜಿ. ವೈದ್ಯನಾಥ, ವಿಚಾರಣಾ ಆಯೋಗದ ಅಧ್ಯಕ್ಷರಿಗೆ, ಕಾರ್ಯದರ್ಶಿಯವರಿಗೆ ಹಾಗೂ ಸಿಬ್ಬಂದಿಯ ವೇತನ ವೆಚ್ಚ ಭರಿಸಲು ಅನುಕೂಲವಾಗುವಂತೆ ₹ **8,00,000/– (ರೂಪಾಯಿ ಎಂಟು ಲಕ್ಷ ಮಾತ್ರ)ಗಳನ್ನು** ಲೆಕ್ಕ ಶೀರ್ಷಿಕೆ "**2070–00–105–0–02–059 ಇತರ ವಿಚಾರಣಾ ಆಯೋಗ**" ಅಡಿಯಲ್ಲಿ ಭರಿಸುವಂತೆ ಹಣವನ್ನು ಸರ್ಕಾರವು ಮಂಜೂರು ಮಾಡಿದೆ.

ಆಯೋಗದ ಕಾರ್ಯದರ್ಶಿಯವರು ಹಣವನ್ನು ಹಿಂತೆಗೆಯವ ಮತ್ತು ವಿತರಿಸುವ ಅಧಿಕಾರಿಯಾಗಿ ಕರ್ತವ್ಯ ನಿರ್ವಹಿಸುವರು.

ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 3 ಟಿಎಫ್‌ಪಿ 2014, ದಿನಾಂಕ: 04/04/2014ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳಿಗೆ ಅಧಿಕಾರದನ್ವಯ ಪ್ರತ್ಯಾಯೋಜಿಸಿ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋವಿಂದಸ್ವಾಮಿ,**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ)

P.R. 837

SC-25

## ಒಳಾಡಳಿತ ಸಚಿವಾಲಯ

### ಸುತ್ತೋಲೆ

**ಸಂಖ್ಯೆ: ಹೆಚ್‌ಡಿ 242 ಕೆಎಎ 2014 ಬೆಂಗಳೂರು, ದಿನಾಂಕ: 06/11/2014**

ಶಸ್ತ್ರ ಪರವಾನಗಿ ವ್ಯಾಪ್ತಿಯನ್ನು ವಿಸ್ತರಿಸುವ ಪ್ರಸ್ತಾವಗಳನ್ನು ಅಗತ್ಯ ದಾಖಲೆ ಮತ್ತು ಮಾಹಿತಿ ಇಲ್ಲದೆ ಸರ್ಕಾರಕ್ಕೆ ಸಲ್ಲಿಸುತ್ತಿರುವುದನ್ನು ಹಲವಾರು ಪ್ರಕರಣಗಳಲ್ಲಿ ಗಮನಿಸಲಾಗಿದೆ. ರಾಷ್ಟ್ರೀಯ ಭದ್ರತೆಯನ್ನು ಗಮನದಲ್ಲಿಟ್ಟುಕೊಂಡು ಅತೀ ಅವಶ್ಯವಿದ್ದಲ್ಲಿ ಮಾತ್ರ, ದೇಶದಾದ್ಯಂತ ಶಸ್ತ್ರ ಪರವಾನಗಿ

ವ್ಯಾಪ್ತಿಯನ್ನು ವಿಸ್ತರಿಸುವುದು ಸೂಕ್ತವಾಗಿದೆ. ಅರ್ಜಿದಾರರಿಗೆ ಯಾವ ಕಾರಣಕ್ಕಾಗಿ ಭಾರತದಾದ್ಯಂತ ಪರವಾನಗಿ ಬೇಕಾಗಿರುತ್ತದೆ. ಅವರಿಗೆ ಅದರ ಅವಶ್ಯಕತೆ ನಿಜವಾಗಿ ಇರುತ್ತದಯೇ, ಶಸ್ತ್ರ ಪರವಾನಗಿಯನ್ನು ವಿಸ್ತರಿಸುವ ಪ್ರಕರಣಗಳಲ್ಲಿ ಅರ್ಜಿದಾರರ ಪೂರ್ವಾಪರಗಳನ್ನು ಸಮಗ್ರವಾಗಿ ಪರಿಶೀಲಿಸಿ, ಅವರುಗಳು ನಾನಾ ಕಾರಣಗಳಿಗೆ ವಿವಿಧ ರಾಜ್ಯಗಳಲ್ಲಿ ಸಂಚರಿಸಿ ಮತ್ತು ವಾಸ್ತವ್ಯ ಮಾಡಿದ ಬಗ್ಗೆ ವಿವರಗಳನ್ನು ಪಡೆದು ಅವಶ್ಯವಿದ್ದಲ್ಲಿ ಮಾತ್ರ ಶಸ್ತ್ರ ಪರವಾನಗಿಯನ್ನು ವಿಸ್ತರಿಸುವ ಪ್ರಸ್ತಾವಗಳನ್ನು ಸಲ್ಲಿಸುವುದು ಸೂಕ್ತ. ಈ ರೀತಿ ಅಗತ್ಯ ಮಾಹಿತಿಗಳಿಲ್ಲದೆ ಪ್ರಸ್ತಾವಗಳನ್ನು ಸಲ್ಲಿಸುತ್ತಿರುವ ಕಾರಣ ಸರ್ಕಾರದಿಂದ ಇಂತಹ ಮಾಹಿತಿಗಳನ್ನು ಕೋರಿ ಪತ್ರಗಳನ್ನು ಬರೆಯುತ್ತಿದ್ದು, ಪ್ರಕರಣಗಳ ವಿಲೇವಾರಿಯಲ್ಲಿ ಅನಾವಶ್ಯಕ ವಿಳಂಬವಾಗುತ್ತಿದೆ.

ಆದುದರಿಂದ, ಇನ್ನು ಮುಂದೆ ಶಸ್ತ್ರ ಪರವಾನಗಿ ವ್ಯಾಪ್ತಿಯನ್ನು ಭಾರತದಾದ್ಯಂತ/ಯಾವ ಯಾವ ರಾಜ್ಯಗಳಿಗೆ ಸೀಮಿತವಾಗುವಂತೆ ವಿಸ್ತರಿಸುವ ಪ್ರಕರಣಗಳಲ್ಲಿ ಮೇಲ್ಕಂಡ ಎಲ್ಲಾ ಮಾಹಿತಿಗಳನ್ನು ಪರಿಶೀಲಿಸಿ, ಸ್ಪಷ್ಟ ಶಿಫಾರಸ್ಸಿನೊಂದಿಗೆ ಹಾಗೂ ಈ ಸಂಬಂಧ ಶಸ್ತ್ರ ಪರವಾನಗಿ ವಿಸ್ತರಣೆ ವಿವರಗಳನ್ನು ನಮೂದಿಸಲು ಅನುಬಂಧವನ್ನು ಇದರೊಂದಿಗೆ ಲಗತ್ತಿಸಿದೆ. ಸದರಿ ಅನುಬಂಧವನ್ನು ಭರ್ತಿ ಮಾಡಿ, ಇನ್ನು ಮುಂದೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಈ ಮೂಲಕ ತಿಳಿಸಲಾಗಿದೆ.

**ಗೋವಿಂದಸ್ವಾಮಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ)

**ಅನುಬಂಧ**

**ಶಸ್ತ್ರ ಪರವಾನಗಿಗಳ ವ್ಯಾಪ್ತಿ ವಿಸ್ತರಿಸಲು ಈ ಕೆಳಕಂಡ ಅಂಶಗಳನ್ನು ಭರ್ತಿ ಮಾಡಿ ಸಲ್ಲಿಸುವ ಬಗ್ಗೆ**

| | | |
|---|---|---|
| 1. | ಅರ್ಜಿದಾರರ ಹೆಸರು ಮತ್ತು ವಿಳಾಸ,<br>ವಯಸ್ಸು : | |
| 2. | ಶಸ್ತ್ರ ಪರವಾನಗಿ ನವೀಕರಣವಾಗಿರುವ ಅವಧಿ : | |
| 3. | ಅರ್ಜಿದಾರರು ಮಾಡುತ್ತಿರುವ ವೃತ್ತಿ/ವ್ಯಾಪಾರದ ವಿವರ : | |
| 4. | ಶಸ್ತ್ರ ಪರವಾನಗಿ ವ್ಯಾಪ್ತಿ ವಿಸ್ತರಿಸುವ ರಾಜ್ಯಗಳಲ್ಲಿ ಅರ್ಜಿದಾರರು ಸಂಚರಿಸಿರುವ/ ವ್ಯವಹರಿಸಿರುವ ದಾಖಲೆಗಳು : | |
| 5. | ಆದಾಯ ತೆರಿಗೆ ಪಾವತಿ ವಿವರ :<br>(ಕಳೆದ ಮೂರು ಸಾಲಿನ ಹಿಂದಿನ ದಾಖಲೆಗಳು, ಅರ್ಜಿದಾರರು ವ್ಯಾಪಾರಸ್ಥರಾಗಿದ್ದಲ್ಲಿ, ಮಾತ್ರ) | |
| 6. | ಅರ್ಜಿದಾರರ ಮೇಲೆ ಠಾಣೆಯಲ್ಲಿ ದಾಖಲಾಗಿರುವ ಮೊಕದ್ದಮೆಗಳ ವಿವರ (ಇದ್ದಲ್ಲಿ ಲಗತ್ತುಗಳು) : | |
| 7. | ಪೊಲೀಸ್ ಅಧೀಕ್ಷಕರ ನಿರ್ಧಿಷ್ಟ ಅಭಿಪ್ರಾಯದೊಂದಿಗೆ ಶಿಫಾರಸ್ಸು ಇದೆಯೇ ? :<br>(ಶಸ್ತ್ರಾಸ್ತ್ರ ಕಾಯಿದೆ 1959, ಶಸ್ತ್ರಾಸ್ತ್ರ ನಿಯಮ 1962ರ ಷರತ್ತುಗಳಿಗೆ ಒಳಪಟ್ಟಂತೆ) | |
| 8. | ಜಿಲ್ಲಾಧಿಕಾರಿಯವರ /ಪೊಲೀಸ್ ಆಯುಕ್ತರ ಸ್ಪಷ್ಟ ಶಿಫಾರಸ್ಸು ಇದೆಯೇ ?<br>(ಶಸ್ತ್ರಾಸ್ತ್ರ ಕಾಯಿದೆ 1959, ಶಸ್ತ್ರಾಸ್ತ್ರ ನಿಯಮ 1962ರ ಷರತ್ತುಗಳಿಗೆ ಒಳಪಟ್ಟಂತೆ) | |
| 9. | ಶಸ್ತ್ರ ಪರವಾನಗಿ ವ್ಯಾಪ್ತಿ ವಿಸ್ತರಿಸಲು ಶಿಫಾರಸ್ಸು ಮಾಡಲು ನಿರ್ಧಿಷ್ಟ ಕಾರಣಗಳು :<br>(ಶಸ್ತ್ರಾಸ್ತ್ರ ಕಾಯಿದೆ 1959, ಶಸ್ತ್ರಾಸ್ತ್ರ ನಿಯಮ 1962ರ ಷರತ್ತುಗಳಿಗೆ ಒಳಪಟ್ಟಂತೆ) | |

ಸಹಿ/–
(ಜಿಲ್ಲಾಧಿಕಾರಿ/ಪೊಲೀಸ್ ಆಯುಕ್ತರು)

**ಗೋವಿಂದಸ್ವಾಮಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ)

P.R. 838
SC-50

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಬೆಳಗಾವಿ ಸುವರ್ಣಸೌಧ ಕಟ್ಟಡ ಕಾಮಗಾರಿಯ ಪರಿಷ್ಕೃತ ಅಂದಾಜಿನಲ್ಲಿ ಗಣನೀಯ ಹೆಚ್ಚಳ ಕಂಡುಬಂದಿರುವ ಕುರಿತು ತನಿಖೆ ನಡೆಸುವ ಬಗ್ಗೆ

**ಓದಲಾಗಿದೆ :**

1) ಸರ್ಕಾರದ ಆದೇಶ ಸಂಖ್ಯೆ: ಲೋಇ 56 ಬಿಜಿಎಂ 2007 (ಭಾಗ–1) ದಿನಾಂಕ: 31–1–2009
2) ಸರ್ಕಾರದ ಆದೇಶ ಸಂಖ್ಯೆ: ಲೋಇ 58 ಬಿಎಂಎಸ್ 2011 ದಿನಾಂಕ: 2–11–2011
3) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ) ಧಾರವಾಡ, ಇವರ ಪತ್ರ ಸಂ.ಮುಇಂ(ಉ)/ತಾಂಸ – ಸಸುಸೌ:2012–13/13078 ದಿನಾಂಕ: 16–3–2013.

**ಪ್ರಸ್ತಾವನೆ:–**

ಮೇಲೆ ಕ್ರಮಾಂಕ(1)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ: 31–1–2009ರಲ್ಲಿ, ಬೆಳಗಾವಿ ಸುವರ್ಣಸೌಧ ಕಟ್ಟಡ ಕಾಮಗಾರಿಯನ್ನು 2008–09ನೇ ಸಾಲಿನ ದರಪಟ್ಟಿಯಂತೆ ತಯಾರಿಸಲಾಗಿದ್ದ ರೇಖಾ ಅಂದಾಜು ಮೊತ್ತ ರೂ. 230.00 ಕೋಟಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿತ್ತು.

ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ: 2–11–2011ರಲ್ಲಿ, ಕೆಲವೊಂದು ಹೆಚ್ಚುವರಿ ಕಾಮಗಾರಿಗಳ ನಿಮಿತ್ತ, ಈ ಕಾಮಗಾರಿಯ ಪರಿಷ್ಕೃತ ಅಂದಾಜು ಮೊತ್ತ ರೂ. 391.00 ಕೋಟಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿತ್ತು.

ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ) ಧಾರವಾಡ ರವರ ಪತ್ರ ದಿನಾಂಕ: 16–3–2013 ರಲ್ಲಿ ಕಟ್ಟಡ ಕಾಮಗಾರಿ ಪ್ರಗತಿಯಲ್ಲಿದ್ದ ಸಮಯದಲ್ಲಿ ಕಾಮಗಾರಿ ಗುಣ ನಿಯಂತ್ರಣ ಕಾರ್ಯಪಡೆಯ ಸಲಹೆಯಂತೆ ಕಟ್ಟಡದ ಟೆರೇಸ್‌ನಲ್ಲಿ ಇಂಟೆಗ್ರೇಡೆಡ್ ವಾಟರ್ ಪ್ರೂಫಿಂಗ್ ಬದಲಾಗಿ ಸ್ಪ್ರೇಅಪ್ಲಾಯಡ್ ಪಾಲಿಯುರಿಥಿನ್ ಮೆಂಬರೇನ್ ಹಾಗೂ ಸ್ಟ್ರೀಡ್ ಕಾಂಕ್ರೀಟ್ ಅಳವಡಿಸಲಾಗಿದ್ದು, ಕಟ್ಟಡದ ಹೊರಬದಿಯ ಗೋಡೆಗಳಿಗೆ ಎಮಲಷನ್ ಪೇಂಟ್ ಬದಲಾಗಿ ಟೆಕ್ಚರ್ ಪೆಂಟ್, ಸೆಂಟ್ರಲಾಯಜಡ್ ಏರ್‌ಕಂಡೀಷನ್‌ಗಾಗಿ ಎಹೆಚ್‌ಯು ಪಂಪಿಂಗ್ ಸಿಸ್ಟಮ್ ಇತ್ಯಾದಿ ಹೆಚ್ಚುವರಿ ಕಾಮಗಾರಿಗಳಿಂದ ಮರು ಪರಿಷ್ಕೃತ ಅಂದಾಜು ಪತ್ರಿಕೆ ರೂ. 438.04 ಕೋಟಿಗಳಿಗೆ ಅಂದಾಜು ಪತ್ರಿಕೆ ತಯಾರು ಮಾಡಿ, ಸರ್ಕಾರದ ಆಡಳಿತಾತ್ಮಕ ಅನುಮೋದನೆಗೆ ಸಲ್ಲಿಸಿರುತ್ತಾರೆ.

ಈ ಪರಿಷ್ಕೃತ ಅಂದಾಜು ಪತ್ರಿಕೆಗೆ ಆಡಳಿತಾತ್ಮಕ ಅನುಮೋದನೆ ನೀಡುವ ಸಂಬಂಧ ಸಚಿವ ಸಂಪುಟದ ಅನುಮೋದನೆ ಪಡೆಯಲು ಮಂಡಿಸಲಾಗಿ, ಸಚಿವ ಸಂಪುಟವು ಬೆಳಗಾವಿ ಸುವರ್ಣ ಸೌಧ ಕಟ್ಟಡ ಕಾಮಗಾರಿಯ ಕುರಿತು ಈ ಹಿಂದೆ ಮಾಡಲಾಗಿದ್ದ ಪರಿಷ್ಕೃತ ಅಂದಾಜುಗಳು ಹಾಗೂ ಪ್ರಸ್ತುತ ಮರು ಪರಿಷ್ಕೃತ ಅಂದಾಜಿನಲ್ಲಿ ಗಣನೀಯ ಹೆಚ್ಚಳ ಕಂಡುಬಂದಿರುವ ಹಿನ್ನೆಲೆಯಲ್ಲಿ ಈ ವಿಷಯ ಕುರಿತು ಒಂದು ತನಿಖೆಯನ್ನು ಮಾಡಿ ವರದಿ ನೀಡಲು ಶ್ರೀ ಜಿ.ವಿ. ಕೃಷ್ಣರಾವ್, ಆಗಿನ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರಿಗೆ ವಹಿಸಲು ತೀರ್ಮಾನಿಸಿತ್ತು. ಶ್ರೀಯುತರು ದಿನಾಂಕ: 31–7–2014 ರಂದು ಸೇವೆಯಿಂದ ನಿವೃತ್ತರಾಗಿದ್ದು, ಸದರಿಯವರನ್ನೇ ಈ ಪ್ರಕರಣದ ತನಿಖೆಗೆ ವಹಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 131 ಬಿಎಂಎಸ್ 2013, ಬೆಂಗಳೂರು ದಿನಾಂಕ: 16ನೇ ಸೆಪ್ಟೆಂಬರ್ 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಜಿ.ವಿ. ಕೃಷ್ಣರಾವ್, ನಿವೃತ್ತ ಐಎಎಸ್ ಅಧಿಕಾರಿ ರವರನ್ನು, ಬೆಳಗಾವಿ ಸುವರ್ಣಸೌಧ ಕಟ್ಟಡ ಕಾಮಗಾರಿಯ ಕುರಿತಯ ಈ ಹಿಂದೆ ಮಾಡಲಾಗಿದ್ದ ಪರಿಷ್ಕೃತ ಅಂದಾಜುಗಳು ಹಾಗೂ ಪ್ರಸ್ತುತ ಮರು ಪರಿಷ್ಕೃತ ಅಂದಾಜಿನಲ್ಲಿ ಗಣನೀಯ ಹೆಚ್ಚಳ ಕಂಡುಬಂದಿರುವ ವಿಷಯ ಕುರಿತು ಒಂದು ತನಿಖೆಯನ್ನು ಮಾಡಿ ವರದಿ ನೀಡಲು ತನಿಖಾಧಿಕಾರಿಯಾಗಿ ನೇಮಿಸಿ ಆದೇಶಿಸಿದೆ.

(2) ಮುಂದುವರೆದು, ಸದರಿ ತನಿಖಾಧಿಕಾರಿಯವರು ಈ ಕೆಳಕಂಡ ಅಂಶಗಳ ಹಿನ್ನೆಲೆಯಲ್ಲಿ ತನಿಖಾ ವರದಿಯನ್ನು ಸಲ್ಲಿಸತಕ್ಕದ್ದಾಗಿರುತ್ತದೆ.

1. ಬೆಳಗಾವಿ ಸುವರ್ಣಸೌಧ ಕಟ್ಟಡ ನಿರ್ಮಾಣದ ಪ್ರಾರಂಭಿಕ ಅಂದಾಜು ಪಟ್ಟಿ ಮತ್ತು ಈಗ ಉದ್ಭವಿಸಿರುವ ಎಲ್ಲಾ ಹೆಚ್ಚುವರಿ ಅಂಶಗಳನ್ನು ಸೇರಿಸಿ ತಯಾರಿಸಿದಲ್ಲಿ ಈಗ ಉದ್ಭವಿಸಿರುವ ಪರಿಷ್ಕೃತ ಮತ್ತು ಮರುಪರಿಷ್ಕೃತ ಅಂದಾಜುಗಳನ್ನು ತಡೆಗಟ್ಟಬಹುದಾಗಿತ್ತೆ ಎಂಬ ಬಗ್ಗೆ.
2. ಮೂಲ ಅಂದಾಜು ಪತ್ರಿಕೆ, ಪರಿಷ್ಕೃತ ಅಂದಾಜು ಪತ್ರಿಕೆ ಹಾಗೂ ಮರು ಪರಿಷ್ಕೃತ ಅಂದಾಜು ಪತ್ರಿಕೆಗಳು ವಾಸ್ತವಾಂಶದಿಂದ ಕೂಡಿದೆಯೇ ? ಅವುಗಳು ಅವಶ್ಯಕವಿತ್ತೆ ? ಹಾಗೂ ಅವುಗಳಲ್ಲಿ ತಿಳಿಸಿರುವ ಎಲ್ಲಾ ಅಂಶಗಳನ್ನು ಪೂರ್ಣಗೊಂಡಿರುವ ಕಟ್ಟಡ ನಿರ್ಮಾಣ ಕಾಮಗಾರಿಯಲ್ಲಿ ಸೂಕ್ತ ರೀತಿಯಲ್ಲಿ ಅಳವಡಿಸಲಾಗಿದೆಯೇ ?
3. ಮೂಲ ಅಂದಾಜು ಪತ್ರಿಕೆ, ಪರಿಷ್ಕೃತ ಅಂದಾಜು ಪತ್ರಿಕೆ ಹಾಗೂ ಮರು ಪರಿಷ್ಕೃತ ಅಂದಾಜು ಪತ್ರಿಕೆಗಳನ್ನು ತಯಾರಿಸುವಾಗ ಲೋಪದೋಷಗಳು ಆಗಿರುವುದೇ ? ಹಾಗೂ ಈ ಹೆಚ್ಚುವರಿ ಅಂದಾಜಿಗೆ ನೀಡಿರುವ ಕಾರಣಗಳ ವಾಸ್ತವಾಂಶದ ಬಗ್ಗೆ
4. ಈ ಪ್ರಕರಣಗಳಲ್ಲಿ ಅಧಿಕಾರಿಗಳ ಕರ್ತವ್ಯಚ್ಯುತಿ ಆಗಿರುವುದೇ ? ಆಗಿದ್ದಲ್ಲಿ, ಶಿಸ್ತು ಪ್ರಕರಣವನ್ನು ಹೂಡುವ ವಿಷಯವನ್ನು ಒಳಗೊಂಡಂತೆ, ತನಿಖಾಧಿಕಾರಿಗಳ ಅಧ್ಯಯನ ವರದಿಯು ಹಾಲಿ ವ್ಯವಸ್ಥೆಯಲ್ಲಿನ ಲೋಪದೋಷಗಳನ್ನು ಗುರುತಿಸಿ, ಪ್ರಸಕ್ತ ವ್ಯವಸ್ಥೆಗೆ ಸುಧಾರಣೆ ತರುವ ನಿಟ್ಟಿನಲ್ಲಿ ಆದ್ಯತೆ ನೀಡಿ ಶಿಫಾರಸ್ಸು ಸಲ್ಲಿಸುವುದು.
5. ಈ ರೀತಿಯ ಪರಿಷ್ಕೃತ ಮತ್ತು ಮರು ಪರಿಷ್ಕೃತ ಅಂದಾಜು ಪತ್ರಿಕೆಗಳಿಗೆ ಕಡಿವಾಣ ಹಾಕಲು ಸೂಕ್ತ ಸಲಹೆ ಹಾಗೂ ಶಿಫಾರಸ್ಸನ್ನು ಸಲ್ಲಿಸುವುದು.

(3) ತನಿಖಾಧಿಕಾರಿಗಲಿಗೆ, ತನಿಖೆ ನಡೆಸಲು ಅಗತ್ಯವಿರುವ ಸಂಬಂಧಿಸಿದ ಎಲ್ಲಾ ದಾಖಲೆಗಳನ್ನು, ಪೂರಕ ಸಿಬ್ಬಂದಿ ಹಾಗೂ ಅವಶ್ಯಕ ವಾಹನ ಸೌಲಭ್ಯಗಳನ್ನು, ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ ರವರು ಅವರಲ್ಲಿ ಲಭ್ಯವಿರುವ ಸಿಬ್ಬಂದಿಗಳ ಹಾಗೂ ಸೌಲಭ್ಯಗಳ ಹೊಂದಾಣಿಕೆಯೊಂದಿಗೆ ಒದಗಿಸತಕ್ಕದ್ದು. ತನಿಖಾಧಿಕಾರಿಯವರಿಗೆ, ಬೆಳಗಾವಿ ಸುವರ್ಣಸೌಧ ಕಟ್ಟಡದಲ್ಲಿ ಒಂದು ಕೊಠಡಿಯನ್ನು ಕಛೇರಿ ಸಲುವಾಗಿ ಒದಗಿಸತಕ್ಕದ್ದು.

(4) ತನಿಖಾಧಿಕಾರಿಗಳ ಸಂಭಾವನೆ ಹಾಗೂ ಇತರೆ ಭತ್ಯೆಗಳ ಬಗ್ಗೆ ಪ್ರತ್ಯೇಕ ಆದೇಶವನ್ನು ಹೊರಡಿಸಲಾಗುವುದು.

(5) ತನಿಖಾಧಿಕಾರಿಗಳು ಈ ಪ್ರಕರಣಕ್ಕೆ ಸಂಬಂಧಿಸಿದಂತೆ 3 (ಮೂರು) ತಿಂಗಳ ಒಳಗೆ ತನಿಖೆ ಮಾಡಿ ಪೂರ್ಣ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಂ. ಚಂದ್ರಶೇಖರ್,**

P.R. 844

ಸರ್ಕಾರದ ಅಧೀನ ಕಾರ್ಯದರ್ಶಿ

ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ (ಕಟ್ಟಡಗಳು)

## ಇಂಧನ ಸಚಿವಾಲಯ

**ವಿಷಯ :** ಶ್ರೀ ಸತ್ಯಸಾಯಿ ಉನ್ನತ ವೈದ್ಯಕೀಯ ವಿಜ್ಞಾನ ಸಂಸ್ಥೆ ಹಾಗೂ ಶ್ರೀ ಸತ್ಯಸಾಯಿ ಜನರಲ್ ಆಸ್ಪತ್ರೆ ವೈಟ್‌ಫೀಲ್ಡ್, ಬೆಂಗಳೂರು ಇವರಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವ ಸಂಬಂಧ ಸಹಾಯ ಧನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1) ಸರ್ಕಾರದ ಆದೇಶ ಸಂಖ್ಯೆ: ಇಂಇ 51 ಇಇಬಿ 2011 ದಿನಾಂಕ: 27–04–2001

2) ಬೆಸ್ಕಾಂ ಪತ್ರ ಸಂಖ್ಯೆ: ವ್ಯನಿ/ನಿ/(ಹ)/ಮುಪ್ರವ್ಯ (ಹ &ವಾ)/ಬಿಸಿ–27/2301/14–15/2 ದಿನಾಂಕ: 02–07–2013

3) ಸರ್ಕಾರದ ಆದೇಶ ಸಂಖ್ಯೆ: ಇಎನ್ 64 ಇಇಬಿ 2014 ದಿನಾಂಕ: 08–07–2014.

4) ಬೆಸ್ಕಾಂನ ಪತ್ರ ಸಂಖ್ಯೆ: ವ್ಯನಿ/ನಿ(ಹ) ಮು.ಪ್ರವ್ಯ (ಹ & ವಾ)ಬಿಸಿ–27/2301/14–15/14–15/03 ದಿನಾಂಕ:16–07–2014.

**ಪ್ರಸ್ತಾವನೆ:–**

ಶ್ರೀ ಸತ್ಯಸಾಯಿ ಉನ್ನತ ವೈದ್ಯಕೀಯ ವಿಜ್ಞಾನ ಸಂಸ್ಥೆ ವೈಟ್ ಫೀಲ್ಡ್, ಬೆಂಗಳೂರು ಈ ಸಂಸ್ಥೆಯು ಬಳಸುತ್ತಿರುವ ವಿದ್ಯುತ್ತಿಗೆ ಸಂಬಂಧಿಸಿದಂತೆ ಪ್ರತಿ ವರ್ಷ ರೂ.2.00 ಕೋಟಿಗಳು ಮೀರದಂತೆ ಸರ್ಕಾರದಿಂದ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ ಸಂಸ್ಥೆಗೆ ಸಹಾಯಧನ ಬಿಡುಗಡೆ ಮಾಡಲು ಮೇಲೆ ಓದಲಾದ ಕ್ರಮಾಂಕ (1)ರ ಆದೇಶದಲ್ಲಿ ಅವಕಾಶ ಕಲ್ಪಿಸಲಾಗಿರುತ್ತದೆ. ಅದರಂತೆ ಪ್ರತಿ ವರ್ಷ ಸಹಾಯಧನ ಬಿಡುಗಡೆ ಮಾಡಲಾಗುತ್ತಿದೆ.

ಮೇಲೆ ಓದಲಾದ ಕ್ರಮಾಂಕ (2)ರ ಅರೆ ಸರ್ಕಾರಿ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ ರವರು ಶ್ರೀ ಸತ್ಯಸಾಯಿ ಉನ್ನತ ವೈದ್ಯಕೀಯ ವಿಜ್ಞಾನ ಸಂಸ್ಥೆ ವೈಟ್ ಫೀಲ್ಡ್, ಬೆಂಗಳೂರು ಹಾಗೂ ಶ್ರೀ ಸತ್ಯಸಾಯಿ ಜನರಲ್ ಆಸ್ಪತ್ರೆ, ಬೆಂಗಳೂರು ರವರಿಗೆ ಒದಗಿಸುತ್ತಿರುವ ವಿದ್ಯುತ್ ಬಾಬ್ತು 2007–2008ನೇ ಸಾಲಿಗೆ ಬಿಡುಗಡೆ ಮಾಡಬೇಕಾಗಿದ್ದ ರೂ.2.00 ಲಕ್ಷಗಳ ಮೊತ್ತವೂ ಸೇರಿದಂತೆ ಮಾರ್ಚ್ 2014ರ ಅಂತ್ಯದವರೆಗೆ ಸದರಿ ಸಂಸ್ಥೆಯವರು ಬಳಸಿರುವ ವಿದ್ಯುತ್ ಬಿಲ್ಲಿನ ಒಟ್ಟು ಮೊತ್ತ ರೂ. 3.93,34,298.00/–ಗಳನ್ನು ಬಿಡುಗಡೆ ಮಾಡಬೇಕೆಂದು ಕೋರಿರುತ್ತಾರೆ. ಈ ಪೈಕಿ ಸದರಿ ಶ್ರೀ ಸತ್ಯಸಾಯಿ ಉನ್ನತ ವೈದ್ಯಕೀಯ ವಿಜ್ಞಾನ ಸಂಸ್ಥೆ ವೈಟ್ ಫೀಲ್ಡ್, ಬೆಂಗಳೂರು ಹಾಗೂ ಶ್ರೀ ಸತ್ಯಸಾಯಿ ಜನರಲ್ ಆಸ್ಪತ್ರೆ, ಬೆಂಗಳೂರು ಸಂಸ್ಥೆಯು 2013–14ನೇ ಸಾಲಿನಲ್ಲಿ ಅಂದರೆ ಮಾರ್ಚ್ 2014ರ ಅಂತ್ಯದವರೆಗೆ ಬಳಸಿದ್ದ ವಿದ್ಯುತ್ ಬಿಲ್ಲಿನ ಮೊತ್ತ ರೂ.2.00 ಕೋಟಿಗಳನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ಬಿಡುಗಡೆ ಮಾಡಿ ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮಾಂಕ (4)ರ ಅರೆ ಸರ್ಕಾರಿ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ ರವರು ಶ್ರೀ ಸತ್ಯಸಾಯಿ ಉನ್ನತ ವೈದ್ಯಕೀಯ ವಿಜ್ಞಾನ ಸಂಸ್ಥೆ ವೈಟ್ ಫೀಲ್ಡ್, ಬೆಂಗಳೂರು ಇವರು 2007–08ನೇ ಸಾಲಿನಲ್ಲಿ ಬಳಸಿದ್ದ ವಿದ್ಯುತ್ ಬಿಲ್ಲಿನ ಸಹಾಯಧನವನ್ನು ಕೆಲವು ಕಾರಣಗಳಿಂದಾಗಿ ಸರ್ಕಾರದಿಂದ ಬಿಡುಗಡೆಯಾಗಿರುವುದಿಲ್ಲ. ಆದ್ದರಿಂದ 2007–08ನೇ ಸಾಲಿನ ಸಹಾಯಧನದ ಬಾಕಿ ಮೊತ್ತ ರೂ. 1,93,34,298/–ಗಳನ್ನು ಬಿಡುಗಡೆ ಮಾಡುವಂತೆ ಕೋರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 64 ಇಇಬಿ 2014 ಬೆಂಗಳೂರು, ದಿನಾಂಕ: 30–10–2014**

ಶ್ರೀ ಸತ್ಯಸಾಯಿ ಉನ್ನತ ವೈದ್ಯಕೀಯ ವಿಜ್ಞಾನ ಸಂಸ್ಥೆ ವೈಟ್ ಫೀಲ್ಡ್, ಬೆಂಗಳೂರು ಈ ಸಂಸ್ಥೆಯವರು 2007–08ನೇ ಸಾಲಿನಲ್ಲಿ ಬಳಸಿದ್ದ ವಿದ್ಯುತ್ ಬಿಲ್ಲಿನ ಬಾಕಿ ಮೊತ್ತ ರೂ. 1,93,34,298/– (ಒಂದು ಕೋಟಿ ತೊಂಬತ್ತೂರು ಲಕ್ಷ ಮೂವತ್ತಾಲ್ಕು ಸಾವಿರ ಇನ್ನೂರ ತೊಂಬತೆಂಟು ರೂ.ಗಳು ಮಾತ್ರ) ಗಳನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಸರ್ಕಾರಿ ಸಹಾಯಧನದ ರೂಪದಲ್ಲಿ 2014–15ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ '2801–80–101–1–04–106 (ಯೋಜನೇತರ)' ರಡಿಯಲ್ಲಿ ಬಿಡುಗಡೆ ಮಾಡಿ ಆದೇಶಿಸಿದೆ.

ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಬೆಂಗಳೂರು ಇವರು ಹಣ ಸಂದಾಯ ರಶೀದಿಗೆ (Payees Receipt) ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ, ಇವರ ಮೇಲುರುಜುವನ್ನು ಪಡೆದುಕೊಳ್ಳತಕ್ಕದ್ದು ಹಾಗೂ ಈ ಬಗ್ಗೆ ಸರಿಯಾದ ಲೆಕ್ಕ ತಃಖ್ತೆಯನ್ನು ಇಟ್ಟುಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1086 ಇಎಕ್ಸ್‌ಪಿ–1/2014 ದಿನಾಂಕ: 27–10–2014 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್,**

P.R. 845

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** 2014–15ನೇ ಸಾಲಿಗೆ ಖಾಸಗಿ ಹಾಗೂ ಡೀಮ್ಡ್ ವಿಶ್ವವಿದ್ಯಾಲಯಗಳಲ್ಲಿನ ಸರ್ಕಾರಿ ಕೋಟಾದ ಪಿ.ಜಿ. ಸೂಪರ್ ಸ್ಪೆಷಾಲಿಟಿ ಸೀಟುಗಳಿಗೆ ಪ್ರವೇಶ ಪಡೆಯುವ ವಿದ್ಯಾರ್ಥಿಗಳಿಗೆ ಬೋಧನಾ ಶುಲ್ಕವನ್ನು ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ :** ವೈದ್ಯಕೀಯ ಶಿಕ್ಷಣ ನಿರ್ದೇಶಕರ ದಿನಾಂಕ : 04–09–2014ರ ಪತ್ರ ಸಂಖ್ಯೆ : ಎಂಇ/01ಎ/2014–15.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ವೈದ್ಯಕೀಯ ಶಿಕ್ಷಣ ನಿರ್ದೇಶಕರು 2014–15ನೇ ಸಾಲಿನಲ್ಲಿ ಕೆಲವೊಂದು ಡೀಮ್ಡ್ ವಿಶ್ವವಿದ್ಯಾಲಯಗಳು ಅವರಿಗೆ ಮಂಜೂರಾದ ಸೂಪರ್ ಸ್ಪೆಷಾಲಿಟಿ ಕೋರ್ಸುಗಳ ಸೀಟುಗಳಲ್ಲಿ ಒಪ್ಪಂದದ ಪ್ರಕಾರ ಸರ್ಕಾರಕ್ಕೆ ಕೆಲವೊಂದು ಸೀಟುಗಳನ್ನು ಬಿಟ್ಟುಕೊಟ್ಟಿದ್ದು, ಸದರಿ ಸಂಸ್ಥೆಗಳು ತಮ್ಮದೇ ಆದ ಬೋಧನಾ ಶುಲ್ಕವನ್ನು ನಿಗದಿಪಡಿಸಿಕೊಂಡಿರುತ್ತವೆ. ಈ ಸಂಸ್ಥೆಗಳಿಗೆ ಸರ್ಕಾರಿ ಕೋಟಾದಡಿ ಪ್ರವೇಶ ಪಡೆಯುವ ಸೇವಾನಿರತ ವೈದ್ಯರು ಹಾಗೂ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಶುಲ್ಕ ಮರುಪಾವತಿ ಮಾಡುವ ಸಂಬಂಧ ಸರ್ಕಾರದಿಂದ ಬೋಧನಾ ಶುಲ್ಕದ ದರವನ್ನು ನಿಗದಿಪಡಿಸಿ ಆದೇಶ ಹೊರಡಿಸಬೇಕಾಗಿರುತ್ತದೆ ಎಂದು ಕೋರಿರುತ್ತಾರೆ.

ಮುಂದುವರಿದು, ಸೂಪರ್ ಸ್ಪೆಷಾಲಿಟಿ ಕೋರ್ಸುಗಳೂ ಸಹ ಸ್ನಾತಕೋತ್ತರ ವೈದ್ಯಕೀಯ ಕೋರ್ಸುಗಳಾಗಿರುವುದರಿಂದ ಡೀಮ್ಡ್ ವಿಶ್ವವಿದ್ಯಾಲಯಗಳಲ್ಲಿನ ಸರ್ಕಾರಿ ಕೋಟಾದ ಸೀಟುಗಳಲ್ಲಿ ಸ್ನಾತಕೋತ್ತರ ವೈದ್ಯಕೀಯ/ ದಂತ ವ್ಯಾಸಂಗ ಮಾಡುತ್ತಿರುವ ಸೇವಾನಿರತ ವೈದ್ಯರು ಹಾಗೂ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಸರ್ಕಾರವು ಖಾಸಗಿ ವೈದ್ಯಕೀಯ ಕಾಲೇಜುಗಳ ಒಕ್ಕೂಟದೊಂದಿಗೆ ಮಾಡಿಕೊಂಡಿರುವ ಒಟ್ಟಾಭಿಪ್ರಾಯ ಒಡಂಬಡಿಕೆ ಪ್ರಕಾರ ಕ್ಲಿನಿಕಲ್ ಡಿಗ್ರಿ ವಿಷಯಗಳಿಗೆ ವಾರ್ಷಿಕ ರೂ. 3,35,000/–ಗಳನ್ನು ಮರುಪಾವತಿಸಲಿದ್ದು, ಉಳಿದ ಶುಲ್ಕವನ್ನು ವಿದ್ಯಾರ್ಥಿಗಳೇ ಭರಿಸಬೇಕೆಂದು ಷರತ್ತನ್ನು ವಿಧಿಸಿ ಸೀಟನ್ನು ಹಂಚಿಕೆ ಮಾಡಲಾಗುತ್ತಿದೆ.

ಅದೇ ರೀತಿ ಖಾಸಗಿ ಹಾಗೂ ಡೀಮ್ಡ್ ವಿಶ್ವವಿದ್ಯಾಲಯಗಳಲ್ಲಿನ ಸರ್ಕಾರಿ ಕೋಟಾದ ಪಿಜಿ ಸೂಪರ್ ಸ್ಪೆಷಾಲಿಟಿ ಸೀಟುಗಳಿಗೆ ಪ್ರವೇಶ ಪಡೆಯುವ ಸೇವಾನಿರತ ವೈದ್ಯರು ಹಾಗೂ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಖಾಸಗಿ ಹಾಗೂ ಡೀಮ್ಡ್ ವಿಶ್ವವಿದ್ಯಾಲಯಗಳು ನಿಗಧಿಪಡಿಸಿಕೊಂಡಿರುವ ಬೋಧನಾ ಶುಲ್ಕದಲ್ಲಿ ಸರ್ಕಾರದಿಂದ ವಾರ್ಷಿಕ ರೂ. 3,35,000/– ಗಳನ್ನು ಮರುಪಾವತಿಸಲು ಹಾಗೂ ಉಳಿದ ಶುಲ್ಕವನ್ನು ವಿದ್ಯಾರ್ಥಿಗಳೇ ಭರಿಸಬೇಕೆಂಬ ಷರತ್ತನ್ನು ವಿಧಿಸಿ ಸರ್ಕಾರದ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ 2014–15ನೇ ಸಾಲಿಗೆ ಖಾಸಗಿ ಹಾಗೂ ಡೀಮ್ಡ್ ವಿಶ್ವವಿದ್ಯಾಲಯಗಳಲ್ಲಿನ ಸರ್ಕಾರಿ ಕೋಟಾದ ಪಿಜಿ ಸೂಪರ್ ಸ್ಪೆಷಾಲಿಟಿ ಸೀಟುಗಳಿಗೆ ಪ್ರವೇಶ ಪಡೆಯುವ ಸೇವಾನಿರತ ವೈದ್ಯರು ಹಾಗೂ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಖಾಸಗಿ ಹಾಗೂ ಡೀಮ್ಡ್ ವಿಶ್ವವಿದ್ಯಾಲಯಗಳು ನಿಗದಿಪಡಿಸಿಕೊಂಡಿರುವ ಬೋಧನಾ ಶುಲ್ಕದಲ್ಲಿ ಸರ್ಕಾರದಿಂದ ವಾರ್ಷಿಕ ರೂ. 3,35,000/–ಗಳನ್ನು ಮರುಪಾವತಿಸಲು ಹಾಗೂ ಉಳಿದ ಶುಲ್ಕವನ್ನು ವಿದ್ಯಾರ್ಥಿಗಳೇ ಭರಿಸಬೇಕೆಂದು ಷರತ್ತನ್ನು ವಿಧಿಸಲು ಸರ್ಕಾರವು ತೀರ್ಮಾನಿಸಿ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 101 ಆರ್‌ಜಿಯು 2012, ಬೆಂಗಳೂರು, ದಿನಾಂಕ : 18–12–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2014–15ನೇ ಸಾಲಿಗೆ ಖಾಸಗಿ ಹಾಗೂ ಡೀಮ್ಡ್ ವಿಶ್ವವಿದ್ಯಾಲಯಗಳಲ್ಲಿನ ಸರ್ಕಾರಿ ಕೋಟಾದ ಪಿಜಿ ಸೂಪರ್‌ಸ್ಪೆಷಾಲಿಟಿ ಸೀಟುಗಳಿಗೆ ಪ್ರವೇಶ ಪಡೆಯುವ ಸೇವಾನಿರತ ವೈದ್ಯರು ಹಾಗೂ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಖಾಸಗಿ ಹಾಗೂ ಡೀಮ್ಡ್ ವಿಶ್ವವಿದ್ಯಾಲಯಗಳು ನಿಗದಿಪಡಿಸಿಕೊಂಡಿರುವ ಬೋಧನಾ ಶುಲ್ಕದಲ್ಲಿ ಸರ್ಕಾರದಿಂದ ವಾರ್ಷಿಕ ರೂ. 3,35,000/– ಗಳನ್ನು ಮರುಪಾವತಿಸುವುದು ಹಾಗೂ ಉಳಿದ ಶುಲ್ಕವನ್ನು ವಿದ್ಯಾರ್ಥಿಗಳೇ ಭರಿಸಬೇಕೆಂಬ ಷರತ್ತನ್ನು ವಿಧಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 19**
**ಎಸ್.ಕೆ. ನಾಗವೇಣಿ**

**SC-50**

ಸರ್ಕಾರದ ಅಧೀನ ಕಾರ್ಯದರ್ಶಿ–2,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಸದಾಶಿವ, ಎಹೆಚ್‌ಸಿ–126, ಸಿಎಆರ್, ಮೈಸೂರು ನಗರ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಉಪ ಪೊಲೀಸ್ ಕಮೀಷನರ್, ನಗರ ಸಶಸ್ತ್ರ ಮೀಸಲು ಪಡೆ, ಮೈಸೂರು ನಗರ ಇವರ ಆದೇಶ ಸಂಖ್ಯೆ : ಇವ/06/2010–11, (ಓ.ಬಿ.ನಂ. 54/2013–14), ದಿನಾಂಕ : 19–07–2013.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಕಮೀಷನರ್, ಮೈಸೂರು ನಗರ ಇವರ ಆದೇಶ ಸಂಖ್ಯೆ : ಮೇಲ್ಮನವಿ/02/2013–14, (ಓ.ಬಿ. ಸಂಖ್ಯೆ : 18/2013–14) ದಿನಾಂಕ : 24–04–2014.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ : 09–05–2014.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು(2)9/2014–15, ದಿನಾಂಕ : 01–08–2014.
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ : ಪಿಎಸ್‌ಸಿ 153 ಸಿಎನ್‌ಎಸ್ 2014, ದಿನಾಂಕ : 04–12–2014.

**ಪ್ರಸ್ತಾವನೆ :**

ಶ್ರೀ ಸದಾಶಿವ, ಎಹೆಚ್‌ಸಿ–126, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ನಗರ ಸಶಸ್ತ್ರ ಮೀಸಲು ಪಡೆ, ಮೈಸೂರು ನಗರ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ, ಬೇಜವಾಬ್ದಾರಿತನ ಮತ್ತು ಅಶಿಸ್ತು ಪ್ರದರ್ಶಿಸಿದ ಕಾರಣ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಮತ್ತು 8ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

ದೋಷಾರೋಪಣೆ :–

"ಸದಾಶಿವ, ಎಹೆಚ್‌ಸಿ–126, ಮತ್ತು ಎಪಿಸಿ–610, ಶ್ರೀ ಶ್ರೀಧರ, ನಗರ ಸಶಸ್ತ್ರ ಮೀಸಲು ಪಡೆ, ಮೈಸೂರು ನಗರ ಆದ ನೀವುಗಳು ದಿನಾಂಕ 03–09–2010 ರಂದು ಬೆಳಿಗ್ಗೆ ಗುಂಡ್ಲಪೇಟೆಯ ನ್ಯಾಯಾಲಯಕ್ಕೆ ಹಾಜರ್ ಪಡಿಸುವ ಸಲುವಾಗಿ ಮೈಸೂರಿನ ಕೇಂದ್ರ ಕಾರಾಗೃಹದಿಂದ ಆಪ್ಸರ್ ಖಾನ್ ಮತ್ತು ರೆಹಮತ್ತುಲ್ಲಾ ಎಂಬ ಇಬ್ಬರು ಆರೋಪಿಗಳನ್ನು ನಿಮ್ಮ ವಶಕ್ಕೆ ಪಡೆದು ಗುಂಡ್ಲುಪೇಟೆ ನ್ಯಾಯಾಲಯಕ್ಕೆ ಹಾಜರ್ ಪಡಿಸಿ ವಾಪಸ್ಸು ಬಸ್ಸ್‌ನಲ್ಲಿ ಕರೆತರುವಾಗ ನಂಜನಗೂಡಿನ ಹುಲ್ಲಹಳ್ಳಿ ಸರ್ಕಲ್ ಬಳಿ ಆಪ್ಸರ್ ಖಾನ್ ಎಂಬ ಆರೋಪಿಯು ತಪ್ಪಿಸಿಕೊಳ್ಳಲು ಕಾರಣರಾಗುವ ಮೂಲಕ ನೀವು ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ, ಬೇಜವ್ದಾರಿತನ ಮತ್ತು ಅಶಿಸ್ತು ಪ್ರದರ್ಶಿಸಿರುತ್ತೀರಿ".

ಈ ಬಗ್ಗೆ ಇಲಾಖಾ ವಿಚಾರಣೆ ನಡೆಸಿ, ಆ.ಪೊ.ಅ.ರ ಮೇಲಿನ ಆಪಾದನೆಗಳು ದೃಢಪಟ್ಟಿರುವುದಾಗಿ ವಿಚಾರಣಾಧಿಕಾರಿಗಳು ವರದಿ ನೀಡಿದ್ದು, ಸದರಿ ವರದಿಯನ್ವಯ ಆ.ಪೊ.ಅ.ರವರಿಗೆ ಕಾರಣ ಕೇಳಿವ ನೋಟೀಸನ್ನು ಜಾರಿ ಮಾಡಿದ್ದು, ಸಮಜಾಯಿಷಿಯನ್ನು ಸಲ್ಲಿಸದ ಕಾರಣ ಏಕಪಕ್ಷೀಯವಾಗಿ ಕ್ರಮ ಕೈಗೊಂಡ ಶಿಸ್ತು ಪ್ರಾಧಿಕಾರ ಹಾಗೂ ಉಪ ಪೊಲೀಸ್ ಕಮೀಷನರ್, ನಗರ ಸಶಸ್ತ್ರ ಮೀಸಲು ಪಡೆ, ಮೈಸೂರು ನಗರ ಇವರು ಕ್ರಮ ಸಂಖ್ಯೆ : (1)ರಲ್ಲಿ ಓದಲಾದ ದಿನಾಂಕ : 19–07–2013ರ ಆದೇಶದಲ್ಲಿ ಈ ಕೆಳಕಂಡಂತೆ ದಂಡನೆಯನ್ನು ವಿಧಿಸಿರುತ್ತಾರೆ.

1. ಆ.ಪೊ.ಅ. ರವರ ಶ್ರೀ ಸದಾಶಿವ, ಎಹೆಚ್‌ಪಿ–126, ರವರ ವೇತನವನ್ನು ದಿನಾಂಕ : 1–07–2013 ರಿಂದ 03 ವರ್ಷಗಳ ಕಾಲ ಅವರು ಪಡೆಯುತ್ತಿರುವ ವೇತನ ಶ್ರೇಣಿಯಲ್ಲಿ ಕನಿಷ್ಠ ಮೂಲ ವೇತನ ರೂ. 12,500/–ಕ್ಕೆ ಬಾಧಕವಾಗುವಂತೆ ವಿಧಿಸಲಾಗಿದೆ.
2. ಈ ದಂಡನೆಯು ದಿನಾಂಕ : 01–07–2013 ರಿಂದ 30–06–2016 ರವರೆಗೆ ಜಾರಿಯಲ್ಲಿರುತ್ತದೆ.
3. ದಂಡನಾವಧಿಯಲ್ಲಿ ವಾರ್ಷಿಕ ವೇತನ ಬಡ್ತಿಗಳಿಗೆ ಅವಕಾಶವಿರುವುದಿಲ್ಲ.
4. ದಂಡನಾವಧಿ ಮುಗಿದ ನಂತರ ಇವರ ವೇತನವನ್ನು ನಿಯಮಾನುಸಾರ ಪೂರ್ವ ಸ್ಥಿತಿಗೆ ನಿಗಧಿಪಡಿಸುವುದು.
5. ದಿನಾಂಕ : 05–09–2010 ರಿಂದ 11–10–2010 ರವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಲಾಗಿದೆ.

ಶಿಸ್ತು ಪ್ರಾಧಿಕಾರದ ಆದೇಶದ ವಿರುದ್ಧ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶಿಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಕಮೀಷನರ್, ಮೈಸೂರು ನಗರ ಇವರು ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ : 24–04–2014ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ.

ಪ್ರಸ್ತುತ ಪ್ರಕರಣದಲ್ಲಿ ತಪ್ಪಿಸಿಕೊಂಡ ವಿಚಾರಣಾಧೀನ ಬಂದಿ ಅಫ್ಜರ್ ಖಾನ್ ಎಂಬುವವನು ಕುಖ್ಯಾತ ವ್ಯಕ್ತಿಯಾಗಿದ್ದು, ಈತನ ಮೇಲೆ 25ಕ್ಕೂ ಹೆಚ್ಚು ಪ್ರಕರಣಗಳು ದಾಖಲಾಗಿದ್ದು, ಇಂತಹವರನ್ನು ವಿಚಾರಣೆಗೆ ಕರೆತರುವಾಗ ಬಲವಾ ಬೆಂಗಾವಲು ನೀಡುವ ಅವಶ್ಯಕತೆ ಇತ್ತು. ಖೈದಿಗಳನ್ನು ನ್ಯಾಯಾಲಯಕ್ಕೆ ಕರೆದೊಯ್ಯುವಲ್ಲಿ ನೀಡಿರುವ ರಹದಾರಿಯಲ್ಲಿ 'ಬಲವಾದ ಬೆಂಗಾವಲು' ಎಂದು ನಮೂದಿಸಲಾಗಿದ್ದರೂ, ಕೇವಲ ಇಬ್ಬರು ಪೊಲೀಸ್ ಕಾನ್ಸ್‌ಟೇಬಲ್‌ಗಳ ಮೇಲ್ವಿಚಾರಣೆಯಲ್ಲಿ ಕಳುಹಿಸಿರುವುದು ವಿಶೇಷ ವಾಹನದಲ್ಲಿ ಹೆಚ್ಚಿನ ಬೆಂಗಾವಲವನ್ನು ಹಾಕಿ ಕಳುಹಿಸದಿರುವುದು ಮುಂತಾದ ಅಂಶಗಳನ್ನು ಪರಿಗಣನೆಗೆ ತೆಗೆದುಕೊಂಡು ಮೇಲಾಧಿಕಾರಿಗಳ ನಿರ್ಲಕ್ಷ್ಯತೆಗೆ ಬಡ ಪೇದೆಗಳನ್ನು ದಂಡನೆಗೆ ಗುರಿಪಡಿಸುವುದು ನ್ಯಾಯಸಮ್ಮತವಲ್ಲ ಎಂದು ತೀರ್ಮಾನಿಸಿದೆ. ಈ ಹಿನ್ನೆಲೆಯಲ್ಲಿ ಆ.ಪೊ.ಅ. ಯವರ ಪರಿಷ್ಕರಣ ಮೇಲ್ಮನವಿಯನ್ನು ಪುರಸ್ಕರಿಸಿ ಶಿಸ್ತು ಪ್ರಾಧಿಕಾರದ ದಂಡನೆಯನ್ನು ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 53 ಪೊಸಿಅ 2014, ಬೆಂಗಳೂರು, ದಿನಾಂಕ : 19–12–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಸದಾಶಿವ, ಎಹೆಚ್‌ಸಿ–126, ಸಿಎಆರ್, ಮೈಸೂರುನಗರ ಇವರ ಪರಿಷ್ಕರಣ ಮೇಲ್ಮನವಿಯನ್ನು ಪುರಸ್ಕರಿಸಿ ಶಿಸ್ತುಪ್ರಾಧಿಕಾರದ ದಂಡನೆಯನ್ನು ಮಾರ್ಪಡಿಸಿ "ವಾಗ್ದಾಂಡನೆ" (censure) ವಿಧಿಸಲು ಹಾಗೂ ಅವರ ಅಮಾನತ್ತಿನ ಅವಧಿಯನ್ನು ಅವರ ಹಕ್ಕಿನಲ್ಲಿರುವ ರಜೆಯೆಂದು ಪರಿಗಣಿಸಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

P.R. 20

**ಜೆ.ಡಿ. ಮಧುಚಂದ್ರ ತೇಜಸ್ವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

## ಕಾನೂನು ಸಚಿವಾಲಯ

**ವಿಷಯ :** ಬಳ್ಳಾರಿ ಕಂದಾಯ ತಾಲ್ಲೂಕಿನಲ್ಲಿ ಖಾಲಿಯಿರುವ ನೋಟರಿ ಹುದ್ದೆ ಭರ್ತಿ ಬಗ್ಗೆ (ಶ್ರೀಮತಿ ಇಂದಿರಾಸಿಂಗ್ ಇವರ ನಿಧನದಿಂದ ತೆರವಾದ ಹುದ್ದೆ)

**ಓದಲಾಗಿದೆ :**

1. ಸರ್ಕಾರದ ಪತ್ರ ಸಂಖ್ಯೆ : ಲಾ 02 ಎಲ್‌ಸಿಎಲ್ 2011, ದಿನಾಂಕ : 07–01–2011.
2. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಳ್ಳಾರಿ ಜಿಲ್ಲೆ, ದಿನಾಂಕ : 22–4–2013.
3. ಸರ್ಕಾರದ ಪತ್ರ ಸಂಖ್ಯೆ : ಲಾ 02 ಎಲ್‌ಸಿಎಲ್ 2011, ದಿನಾಂಕ : 25–05–2013.
4. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಳ್ಳಾರಿ ಜಿಲ್ಲೆ, ದಿನಾಂಕ : 22–10–2013.
5. ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂಖ್ಯೆ : ಜಿಎಸ್‌ಆರ್ 114(ಎ) ದಿನಾಂಕ : 24–02–2009.
6. ಸಂದರ್ಶನ ಮಂಡಳಿ ರಚನೆ ಅಧಿಸೂಚನೆ ಸಂಖ್ಯೆ : ಲಾ 61 ಎಲ್‌ಸಿಎಲ್ 2009, ದಿನಾಂಕ : 24–07–2010 ಮತ್ತು ಲಾ 53 ಎಲ್‌ಸಿಎಲ್ 2013, ದಿನಾಂಕ : 23–7–2013.
7. ಸಂದರ್ಶನ ಸೂಚನಾ ಪತ್ರ ಸಂಖ್ಯೆ : ಲಾ 02 ಎಲ್‌ಸಿಎಲ್ 2011, ದಿನಾಂಕ : 25–08–2014.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ : 07–01–2011ರ ಸರ್ಕಾರದ ಪತ್ರದಲ್ಲಿ ಶ್ರೀಮತಿ ಇಂದಿರಾ ಸಿಂಗ್, ನೋಟರಿ, ಬಳ್ಳಾರಿ ಕಂದಾಯ ತಾಲ್ಲೂಕು ಇವರ ಮರಣ ಪ್ರಮಾಣ ಪತ್ರವನ್ನು ಒದಗಿಸುವುದರೊಂದಿಗೆ ಇವರ ನಿಧನದಿಂದ ತೆರವಾದ ಹುದ್ದೆಯನ್ನು ತುಂಬುವ ಅವಶ್ಯಕತೆ ಇದೆಯೇ ಎಂಬ ಬಗ್ಗೆ ವರದಿ ಕೋರಲಾಗಿದ್ದು. ಅದರಂತೆ, ಓದಲಾದ (2)ರ ದಿನಾಂಕ : 22–4–2013ರ ಪ್ರಸ್ತಾವನೆಯಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಳ್ಳಾರಿ ಜಿಲ್ಲೆ ಇವರು ಸದರಿ ನಿಧನ ಹೊಂದಿರುವ ನೋಟರಿಯವರ ಮರಣ ಪ್ರಮಾಣ ಪತ್ರವನ್ನು ಒದಗಿಸುವುದರೊಂದಿಗೆ ಅವರ ನಿಧನದಿಂದ ತೆರವಾದ ಹುದ್ದೆಯನ್ನು ತುಂಬುವ ಅವಶ್ಯಕತೆ ಇದೆಯೆಂದು ವರದಿ ನೀಡಿರುತ್ತಾರೆ.

ಓದಲಾದ (3)ರ ಸರ್ಕಾರಿ ಪತ್ರದಲ್ಲಿ ಸದರಿ ಹುದ್ದೆಯನ್ನು ಭರ್ತಿ ಮಾಡಲು ಸ್ಥಳೀಯರಿಂದ ಅರ್ಜಿಗಳನ್ನು ಆಹ್ವಾನಿಸಿ ನೋಟರಿಗಳ ಅಧಿನಿಯಮ/ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳು 1977ರ ನಿಯಮ 12 ರಡಿಯಲ್ಲಿ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಳ್ಳಾರಿ ಜಿಲ್ಲೆ ಇವರನ್ನು ದಿನಾಂಕ : 25–05–2013 ರಂದು ಕೋರಲಾಗಿತ್ತು.

ಅದರಂತೆ, ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಳ್ಳಾರಿ ಜಿಲ್ಲೆ ಇವರು ಮೇಲೆ ಓದಲಾದ (4)ರಲ್ಲಿ ದಿನಾಂಕ : 22–10–2013ರ ಪ್ರಸ್ತಾವನೆಯೊಂದಿಗೆ 10 ಜನರ ಮೆಮೋರಿಯಲ್ಸ್‌ಗಳನ್ನೊಳಗೊಂಡ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಆ ಪ್ರಸ್ತಾವನೆಯನ್ನು ಮೇಲೆ ಓದಲಾದ (5)ರಲ್ಲಿ ನೋಟರಿಗಳ ತಿದ್ದುಪಡಿ ನಿಯಮಗಳು 2009ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ಮೇಲೆ ಓದಲಾದ (6)ರ ಅಧಿಸೂಚನೆಗಳಲ್ಲಿ ರಚಿಸಲಾಗಿರುವ ಸಂದರ್ಶನ ಮಂಡಳಿಯ ಪರಿಶೀಲನೆಗೆ ಕಳುಹಿಸಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ ಹಾಜರಾಗುವಂತೆ ಮೇಲೆ ಓದಲಾದ (7)ರ ದಿನಾಂಕ : 25–08–2014ರಲ್ಲಿ ಸಂದರ್ಶನ ಸೂಚನಾ ಪತ್ರದಲ್ಲಿ ಸೂಚಿಸಲಾಗಿತ್ತು. ಅದರಂತೆ, ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ವರದಿ ಸಲ್ಲಿಸಿದೆ.

ಸಂದರ್ಶನ ಮಂಡಳಿಯ ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಲಾ 02 ಎಲ್‌ಸಿಎಲ್ 2011, ಬೆಂಗಳೂರು, ದಿನಾಂಕ : 28–10–2014.**

ನೋಟರಿಗಳ ಅಧಿನಿಯಮ, 1952 ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿಗಳ ನಿಯಮಗಳು, 1956 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ಪರಿಶೀಲಿಸಿ, ನಿಯಮ 8(1)ರಲ್ಲಿ ಪ್ರದತ್ತಗಾಗಿರುವ ಅಧಿಕಾರದನ್ವಯ ಶ್ರೀ ದತ್ತಾತ್ರೇಯ ರೆಡ್ಡಿ, ಸನ್ ಆಫ್ ಪಾಪಯ್ಯ ರೆಡ್ಡಿ, ಕರಾಟೆ ಸ್ಕೂಲ್, ಕನ್ವೋನ್‌ಮೆಂಟ್, ಬಳ್ಳಾರಿ–583104 ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಬಳ್ಳಾರಿ ಜಿಲ್ಲೆಯ ಬಳ್ಳಾರಿ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070–ಇತರೆ ಆಡಳಿತಾತ್ಮಕ ಸೇವೆಗಳು–01–ನ್ಯಾಯ ಪರಿಪಾಲನೆ–501–0–ಇತರೆ ಸ್ವೀಕೃತಿಗಳು–06–ಇತರೆ ಬಾಬ್ತುಗಳಿಗೆ (0070–01–501–0–06) ನೋಟರಿ ನಿಯಮಗಳಲ್ಲಿ ನಿಗದಿಪಡಿಸಲಾದ ರೂ. 1000–00 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ 1952ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ. ಲಕ್ಷ್ಮಣ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),

ಕಾನೂನು ಇಲಾಖೆ (ಆಡಳಿತ–2).

P.R. 21

SC-25

## LAW SECRETARIAT

**Sub :** Fixing the terms and conditions of Hon'ble Dr. Justice. Jawad Rahim, Member, Law Commission of Karnataka, Bangalore-reg-

**Read :** (1) Government Order No.: LAW 42 HRC 2008, Dated: 12.01.2009

(2) Government Notification No.: LAW 26 KLM 2014, Dt: 03.09.2014

**Preamble :**

Government of Karnataka has established the Law Commission of Karnataka with Headquarters at Bangalore, vide G.O. dated: 12.01.2009, read at (1) above. By Notification dated: 03-09-2014, read at (2) above, Hon'ble Dr. Justice. Jawad Rahim, former Judge of the High Court of Karnataka has been appointed as the Member of Law Commission of Karnataka. He has assumed office of the Member, Law Commission of Karnataka on the 4th September, 2014.

!t is necessary to fix terms and conditions of service of the Member, Law Commission of Karnataka.

Hence the orders.

**GOVERNMENT ORDER No: LAW 181 KLM 2014, BANGALORE, DATED 13th OCTOBER, 2014**

Government are pleased to fix the terms and conditions of. Hon'ble Dr. Justice Jawad Rahim, Member. of the Law Commission of Karnataka, Bangalore, as hereunder-:

1. The term of office of the Member shall be for a period of five years from the date of assumption of office;
2. He shall be paid salary and other allowances equal to the salary and allowances of a sitting Judge of the High Court, provided that if, at the time of his appointment, he is in receipt of or being eligible to receive any pension and had elected to draw or receive the pension (other than disability or wound pension) in respect of any previous service under the Government of the Union or the State, his salary in respect of service as Member shall be proportionately reduced:-
   I. By the amount of the pension;
   II. If he had before assuming the office, receiving in lieu of a portion of pension due to him in respect of such previous service, the commuted value thereof by the amount of that portion of the pension; and
   III. By any other form of retirement benefits, being drawn or availed or to be drawn or availed of by him.

Salary includes Basic Pay, House Rent Allowance, City Compensatory Allowance and Dearness Allowance .

3. He shall be entitled to Earned Leave at the rate of 30 days for every completed year of service, Half Pay Leave at the rate of 20 days for every completed year of service and Extraordinary leave upto a maximum of 180 days. in one term of office.
4. On the expiry of his term of office, .he shall be entitled to receive cash equivalent of leave salary in respect of earned leave to his credit subject to the condition that the maximum of leave encased from his term of office- or at the time of retirement from previous service or taken together shall not in any case exceed 300 days. He shall also be entitled to receive Dearness Allowance as admissible on the leave salary.
5. He shall be entitled. to the same Leave Travel Concession as are' admissible to a sitting Judge of the High Court.
6. While on tour (including the journey undertaken to join the Commission or on the expiry of his term with the Commission, to proceed to his Home Town), he shall be entitled to the Travelling Allowance, Allowance for transportation of personal effects and other similar matters and daily allowance as admissible to a sitting High Court Judge.
7. He shall be entitled-to subscribe to the General Provident Fund.
8. The reimbursement of Medical expenses shall be covered by the Karnataka Ministers, Minister of State and Deputy Ministers Medical Attendance Rules, 1958 as applicable to the sitting ,Chief Justice/Judges of-the High Court of Karnataka and subject to the relaxation of the conditions imposed in Government Order No. DPAR 18 Se Vu Nya 2011 (Part), dated: 25.06.2011.
9. He shall be entitled to official car and telephone facilities as admissible to a sitting Judge of High Court.

This issues with the concurrence of the Finance Department vide its U.O. Note No.ಆಇ 743 ಸೇ-3/14, dated : 10th October, 2014.

By Order and in the name of the Governor of Karnataka,

**K.G.V. Murthy**

Special Secretary to Government
(Inter-State Water Disputes & HR),
Law Department

**P.R. 22**

**SC-100**

**ಕಾನೂನು ಸಚಿವಾಲಯ**

**ವಿಷಯ :** ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ಕಂದಾಯ ತಾಲ್ಲೂಕಿನಲ್ಲಿ ಹೊಸದಾಗಿ ಸೃಜಿಸಿರುವ ಒಂದು ನೋಟರಿ ಹುದ್ದೆಯನ್ನು ತುಂಬುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಲಾ 141 ಎಲ್‌ಸಿಎಲ್ 2013, ದಿನಾಂಕ : 19–02–2014.
2. ಸರ್ಕಾರದ ಪತ್ರ ಸಂಖ್ಯೆ : ಲಾ 291 ಎಲ್‌ಸಿಎಲ್ 2014, ದಿನಾಂಕ : 07–07–2014.
3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ಜಿಲ್ಲೆ, ದಿನಾಂಕ : 04–09–2014.
4. ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂಖ್ಯೆ : ಜಿಎಸ್‌ಆರ್ 114(ಎ) ದಿನಾಂಕ : 24–02–2009.
5. ಸಂದರ್ಶನ ಮಂಡಳಿ ರಚನೆ ಅಧಿಸೂಚನೆ ಸಂಖ್ಯೆ : ಲಾ 61 ಎಲ್‌ಸಿಎಲ್ 2009, ದಿನಾಂಕ : 24–7–2010, ಲಾ 53 ಎಲ್‌ಸಿಎಲ್ 2013, ದಿನಾಂಕ : 23–07–2013 ಮತ್ತು ಲಾ 381 ಎಲ್‌ಸಿಎಲ್ 2014, ದಿನಾಂಕ : 25–11–2014.
6. ಸಂದರ್ಶನ ಸೂಚನಾ ಪತ್ರ ಸಂಖ್ಯೆ : ಲಾ 291 ಎಲ್‌ಸಿಎಲ್ 2014, ದಿನಾಂಕ : 29–10–2014.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ : 19–02–2014ರ ಸರ್ಕಾರದ ಆದೇಶದಲ್ಲಿ ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ಕಂದಯ ತಾಲ್ಲೂಕಿಗೆ ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜನೆ ಮಾಡಿದ್ದು, ಅದರಂತೆ, ಓದಲಾದ (2)ರ ಸರ್ಕಾರದ ಪತ್ರದಲ್ಲಿ ಸದರಿ ಹುದ್ದೆಯನ್ನು ಭರ್ತಿ ಮಾಡಲು ಸ್ಥಳೀಯರಿಂದ ಅರ್ಜಿಗಳನ್ನು ಆಹ್ವಾನಿಸಿ ನೋಟರಿಗಳ ಅಧಿನಿಯಮ/ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳು 1977ರ ನಿಯಮ 12 ರಡಿಯಲ್ಲಿ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ಜಿಲ್ಲೆ ಇವರನ್ನು ದಿನಾಂಕ : 07–07–2014 ರಂದು ಕೋರಲಾಗಿತ್ತು.

ಅದರಂತೆ, ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ಜಿಲ್ಲೆ ಇವರು ಮೇಲೆ ಓದಲಾದ (3)ರ ದಿನಾಂಕ : 04–09–2014ರ ಪ್ರಸ್ತಾವನೆಯೊಂದಿಗೆ 03 ಜನರ ಮೆಮೋರಿಯಲ್ಸ್‌ಗಳನ್ನೊಳಗೊಂಡ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಆ ಪ್ರಸ್ತಾವನೆಯನ್ನು ಮೇಲೆ ಓದಲಾದ (4)ರಲ್ಲಿ ನೋಟರಿಗಳ ತಿದ್ದುಪಡಿ ನಿಯಮಗಳು 2009ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ಮೇಲೆ ಓದಲಾದ (5)ರ ಅಧಿಸೂಚನೆಗಳಲ್ಲಿ ರಚಿಸಲಾಗಿರುವ ಸಂದರ್ಶನ ಮಂಡಳಿಯ ಪರಿಶೀಲನೆಗೆ ಕಳುಹಿಸಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ ಹಾಜರಾಗುವಂತೆ ಮೇಲೆ ಓದಲಾದ (6)ರ ದಿನಾಂಕ : 29–10–2014ರಲ್ಲಿ ಸಂದರ್ಶನ ಸೂಚನಾ ಪತ್ರದಲ್ಲಿ ಸೂಚಿಸಲಾಗಿತ್ತು. ಅದರಂತೆ, ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ವರದಿ ಸಲ್ಲಿಸಿದೆ.

ಸಂದರ್ಶನ ಮಂಡಳಿಯ ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಲಾ 291 ಎಲ್‌ಸಿಎಲ್ 2014, ಬೆಂಗಳೂರು, ದಿನಾಂಕ : 19–12–2014.**

ನೋಟರಿಗಳ ಅಧಿನಿಯಮ, 1952 ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿಗಳ ನಿಯಮಗಳು, 1956 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ಪರಿಶೀಲಿಸಿ, ನಿಯಮ 8(1)ರಲ್ಲಿ ಪ್ರದತ್ತಗಾಗಿರುವ ಅಧಿಕಾರದನ್ವಯ ಶ್ರೀ ಡಿ. ನಿರಂಜನಮೂರ್ತಿ, ಸನ್ ಆಫ್ ದೇವಪ್ಪ, ವಕೀಲರು, ಮುರುಗೇಂದ್ರಪ್ಪ ಬಿಲ್ಡಿಂಗ್, ಹೊಸದುರ್ಗ ಟೌನ್, ಚಿತ್ರದುರ್ಗ–577527 ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070–ಇತರೆ ಆಡಳಿತಾತ್ಮಕ ಸೇವೆಗಳು–01–ನ್ಯಾಯ ಪರಿಪಾಲನೆ–501–0–ಇತರೆ ಸ್ವೀಕೃತಿಗಳು–06–ಇತರೆ ಬಾಬ್ತುಗಳಿಗೆ (0070–01–501–0–06) ನೋಟರಿ ನಿಯಮಗಳಲ್ಲಿ ನಿಗಧಿಪಡಿಸಲಾದ ರೂ. 1000–00 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ 1952ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ. ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಕಾನೂನು ಇಲಾಖೆ (ಆಡಳಿತ–2).

**P.R. 23**

**SC-25**

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಜಿ.ಎಂ. ದೇಸೂರ, ಡಿವೈಎಸ್‌ಪಿ, ಜಮಖಂಡಿ ಉಪ ವಿಭಾಗ, ಜಮಖಂಡಿ, ಬಾಗಲಕೋಟೆ ಜಿಲ್ಲೆ ಇವರ ಮೇಲ್ಮನವಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1. ಶಿಸ್ತು ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಇವರ ಆದೇಶ ಸಂಖ್ಯೆ : ಸಿಬಿ(5)3/2013-14 (ಓ.ಬಿ. ಸಂಖ್ಯೆ : 83/2014) ದಿನಾಂಕ : 03-03-2014.
2. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ : 03-05-2014.
3. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಸಿಬಿ(5)3/2013-14, ದಿನಾಂಕ : 01-07-2014.
4. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ : ಪಿಎಸ್‌ಸಿ 189 ಸಿಎನ್‌ಎಸ್ 2014, ದಿನಾಂಕ : 04-12-2014.

**ಪ್ರಸ್ತಾವನೆ :**

ಶ್ರೀ ಜಿ.ಎಂ. ದೇಸೂರ, ಡಿವೈಎಸ್‌ಪಿ, ಜಮಖಂಡಿ ಉಪ ವಿಭಾಗ, ಜಮಖಂಡಿ, ಬಾಗಲಕೋಟೆ ಜಿಲ್ಲೆ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಈ ಹಿಂದೆ ಪಿ.ಎಸ್.ಐ. ಆಗಿ ಬೆಳಗಾವಿ ಗ್ರಾಮೀಣ ಪೊಲೀಸ್ ಠಾಣೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣಗಳ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :-**

"ಶ್ರೀ ಜಿ.ಎಂ. ದೇಸೂರ, ಎಸಿಪಿ : ಹುಬ್ಬಳ್ಳಿ-ಧಾರವಾಡ ನಗರ ಆದ ನೀವು ಈ ಹಿಂದೆ ಪಿಎಸ್‌ಐ ಯಾಗಿ ಬೆಳಗಾವಿ ಗ್ರಾಮೀಣ ಪೊಲೀಸ್ ಠಾಣೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಬೆಳಗಾವಿ ಗ್ರಾಮೀಣ ಪೊಲೀಸ್ ಠಾಣೆ ಮೊ.ಸಂ. 145/02 ಕಲಂ, 420, 465, 467, 468, 474 ಸಕ 34 ಐಪಿಸಿ ಪ್ರಕರಣದ ತನಿಖಾಧಿಕಾರಿಯಾಗಿದ್ದು, ನಿಮ್ಮ ತನಿಖೆಯಲ್ಲಿ ಪ್ರಕರಣಕ್ಕೆ ಸಂಬಂಧಪಟ್ಟ ದಾಖಲಾತಿಗಳನ್ನು ಆರೋಪಿತರುಗಳಿಂದ ವಶಪಡಿಸಿಕೊಂಡಿರುವ ಬಗ್ಗೆ ಹೇಳಿಕೆ ಮಾಡಿಕೊಂಡಿರುತ್ತೀರಿ, ಸದರಿ ಪ್ರಕರಣವು 2ನೇ ಜೆ.ಎಂ.ಎಫ್.ಸಿ. ನ್ಯಾಯಾಲಯ, ಬೆಳಗಾವಿ ಇಲ್ಲಿ ಸಿಸಿ ಸಂಖ್ಯೆ : 48/2005 ವಿಚಾರಣೆಗೊಂಡು ನ್ಯಾಯಾಲಯವು ತೀರ್ಪಿನ ಪುಟ ಸಂಖ್ಯೆ : 20 ರಲ್ಲಿ "under the Circumstances of the case, the non-examination of investigating officer is fatal to the case of the prosecution. ಎಂದು ಷರಾ ಮಾಡಿ ಪ್ರಕರಣದಲ್ಲಿ ಆರೋಪಿತರುಗಳು ಖುಲಾಸೆಗೊಂಡಿರುತ್ತಾರೆ. ನ್ಯಾಯಾಲಯದ ವಿಚಾರಣೆಯಲ್ಲಿ ಇತರೆ ಸಾಕ್ಷಿಗಳು ನೀಡಿರುವ ಸಾಕ್ಷ್ಯವನ್ನು ಅಭಿಯೋಜನೆ ಪೂರಕವಾಗಿ ಪುಷ್ಟೀಕರಿಸಲು ಸಾಕ್ಷ ನುಡಿಯುವಂತೆ ನಿಮಗೆ ನ್ಯಾಯಾಲಯದಿಂದ ದಿನಾಂಕ : 28-10-2010, 14-02-2011, 18-03-2011, 16-06-2011, 08-06-2011, 12-08-2011, 16-09-2011, 16-01-2012 ಗಳಂದು ಸಮನ್ಸ್/ವಾರಂಟ್‌ಗಳನ್ನು ಸಂಬಂಧಪಟ್ಟ ಪೊಲೀಸ್ ಠಾಣೆಯ ಮುಖಾಂತರವಾಗಿ/ನಿಸ್ತಂತು ಮೂಲಕ ಜಾರಿಗೊಳಿಸಲಾಗಿದ್ದರೂ ಸಹ ಜವಾಬ್ದಾರಿಯುತ ಪೊಲೀಸ್ ಅಧಿಕಾರಿಯಾದ ನೀವು ಸದರಿ ದಿನಾಂಕಗಳಂದು ನ್ಯಾಯಾಲಯದಲ್ಲಿ ಹಾಜರಾಗಿ ನಿಮಗೆ ಸಂಬಂಧಪಟ್ಟಂತೆ ಸಾಕ್ಷಿ ನುಡಿಯದೆ ಅತೀವ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿ ಕರ್ತವ್ಯ ಲೋಪವೆಸಗಿರುವುದರಿಂದ ಮೇಲ್ಕಂಡ ಪ್ರಕರಣವು ನ್ಯಾಯಾಲಯದಲ್ಲಿ ಖುಲಾಸೆಗೊಳ್ಳಲು ಕಾರಣಕರ್ತರಾಗಿರುತ್ತೀರಿ"

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ : 03-03-2014ರ ಆದೇಶದಲ್ಲಿ ಇವರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ 6 ತಿಂಗಳ ಅವಧಿಗೆ ತಡೆಹಿಡಿಯಲಾದ ದಂಡನೆಯನ್ನು ವಿಧಿಸಿರುತ್ತಾರೆ.

ಶಿಸ್ತು ಪ್ರಾಧಿಕಾರದ ಆದೇಶದ ವಿರುದ್ಧ ಆ.ಪೊ.ಅ. ರವರು ಸರ್ಕಾರಕ್ಕೆ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಿದಾಗ ಕೆಳಗಿನ ಅಂಶಗಳು ಸ್ಪಷ್ಟವಾಗುತ್ತವೆ.

1. ಶಿಸ್ತು ಪ್ರಾಧಿಕಾರ ನೀಡಿದ ನಿಯಮ 7ರ ನೋಟೀಸ್‌ಗೆ ಆರೋಪಿತ ಪೊಲೀಸ್ ಅಧಿಕಾರಿ ತಮ್ಮ ಸಮಜಾಯಿಷಿಯನ್ನು ನೀಡಿರುತ್ತಾರೆ. ಪ್ರಶ್ನಿತ ಆದೇಶದಲ್ಲಿ ಆರೋಪಿತ ಪೊಲೀಸ್ ಅಧಿಕಾರಿಯ ಸಮಜಾಯಿಷಿಯನ್ನು ಪರಿಶೀಲಿಸಿದ ಬಗ್ಗೆ ನಮೂದಿಸಿದ್ದರೂ ಸಹ ಅವುಗಳನ್ನು ಏಕೆ ಒಪ್ಪಬಾರದು ಅಥವಾ ಅವುಗಳು ಒಪ್ಪದೇ ಇರುವುದಕ್ಕೆ ಯಾವುದಾದರೂ ಸಮಂಜಸ ಕಾರಣಗಳು ಇವೆಯೇ ಎಂಬ ಬಗ್ಗೆ ವಿಶ್ಲೇಷಿಸಿರುವುದಿಲ್ಲ. ಆರೋಪಿತ ಪೊಲೀಸ್ ಅಧಿಕಾರಿ ತನ್ನ ಸಮಜಾಯಿಷಿಯಲ್ಲಿ ಸ್ಪಷ್ಟವಾಗಿ ತನಗೆ ಸಮನ್ಸ್ ಜಾರಿಯಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ ಇದನ್ನು ಶಿಸ್ತು ಪ್ರಾಧಿಕಾರ ಸಂಬಂಧಪಟ್ಟ ಪೊಲೀಸ್ ಠಾಣೆಯಲ್ಲಿ ಇರುವ ದಾಖಲಾತಿಗಳ ಪ್ರಕಾರ ಪರಿಶೀಲಿಸಿಕೊಳ್ಳಬಹುದಿತ್ತು. ಅಥವಾ ಅವರಿಗೆ ಸಮನ್ಸ್ ಜಾರಿಯಾದ ಬಗ್ಗೆ ದಾಖಲಾತಿಗಳ ಬಗ್ಗೆ ಉಲ್ಲೇಖಿಸಬಹುದಿತ್ತು. ಆದರೆ ಅಂತಹ ಯಾವುದೇ ವಿಶ್ಲೇಷಣೆಯನ್ನು ಪ್ರಶ್ನಿತ ಆದೇಶದಲ್ಲಿ ಮಾಡಿರುವುದಿಲ್ಲ. ಅದೇ ರೀತಿ ಆರೋಪಿತ ಪೊಲೀಸ್ ಅಧಿಕಾರಿ ಕೆಲವೊಂದ ದಿನಾಂಕಗಳಂದು ತಾನು ನ್ಯಾಯಾಲಯದಲ್ಲಿ ಹಾಜರಾಗಿದ್ದರೂ ಸಹ ತನ್ನ ಸಾಕ್ಷಿಯನ್ನು ತೆಗೆದುಕೊಳ್ಳಲಿಲ್ಲ ಎಂದು ತನ್ನ ಸಮಜಾಯಿಷಿಯಲ್ಲಿ ತಿಳಿಸಿರುತ್ತಾರೆ. ಇದರ ಬಗ್ಗೆಯೂ ಸಹ ಪ್ರಶ್ನಿತ ಆದೇಶದಲ್ಲಿ ಯಾವುದೇ ವಿಶ್ಲೇಷಣೆಯನ್ನು ಮಾಡಿರುವುದಿಲ್ಲ. ಆರೋಪಿತ ಪೊಲೀಸ್ ಅಧಿಕಾರಿ ತನ್ನ ಪರಿಷ್ಕರಣಾ ಮೇಲ್ಮನವಿಯನ್ನು ಮತ್ತು ಶಿಸ್ತು ಪ್ರಾಧಿಕಾರಕ್ಕೆ ನೀಡಿದ ಸಮಜಾಯಿಷಿಯಲ್ಲಿ ಇದರ ಬಗ್ಗೆ ವಿವರಣೆಗಳನ್ನು ಸಲ್ಲಿಸಿದ್ದು, ತಾನು ಸದರಿ ದಿನಾಂಕಗಳಂದು ನ್ಯಾಯಾಲಯದಲ್ಲಿ ಹಾಜರಾಗಿದ್ದರೂ ಸಹ ತನ್ನ ಸಾಕ್ಷಿಯನ್ನು ತೆಗೆದುಕೊಂಡಿರದ ಬಗ್ಗೆ ಸ್ಪಷ್ಟವಾಗಿ ತಿಳಿಸಿರುತ್ತಾರೆ. ಒಂದು ವೇಳೆ ನ್ಯಾಯಾಲಯದ ಇವರ ಸಾಕ್ಷಿ ಪ್ರಕರಣಕ್ಕೆ ಅತ್ಯಂತ ಪ್ರಮುಖವಾಗಿದೆ ಎಂದು ಕಂಡು ಬಂದಲ್ಲಿ ಇವರು ಹಾಜರಿದ್ದ ದಿನಗಳಂದು ಇವರ ಸಾಕ್ಷಿಯನ್ನು ತೆಗೆದುಕೊಳ್ಳಬಹುದಿತ್ತು. ಮುಂದುವರೆದು ಸರ್ಕಾರಿ ಅಭಿಯೋಜಕರು ಸಹ ಈ ಪ್ರಕರಣದಲ್ಲಿ ಆರೋಪಿತ ಪೊಲೀಸ್ ಅಧಿಕಾರಿಯ ಸಾಕ್ಷಿಯನ್ನು ತೆಗೆದುಕೊಳ್ಳುವಂತೆ ಮಾನ್ಯ ನ್ಯಾಯಾಲಯಕ್ಕೆ ನಿವೇದಿಸಿಕೊಳ್ಳಬಹುದಿತ್ತು. ಇಂತಹ ಯಾವುದೇ ಪ್ರಯತ್ನವಾದಂತೆ

ಕಂಡು ಬರುವುದಿಲ್ಲ. ಅಂದರೆ ಆರೋಪಿತ ಪೊಲೀಸ್ ಅಧಿಕಾರಿ ದುರುದ್ದೇಶದಿಂದ ನ್ಯಾಯಾಲಯಕ್ಕೆ ಸಾಕ್ಷಿ ಹೇಳಲು ವಿಫಲರಾಗಿರುತ್ತಾರೆ ಎಂಬುದು ಎಲ್ಲಿಯೂ ಸ್ಪಷ್ಟವಾಗುವುದಿಲ್ಲ.

2. ಆರೋಪಿತ ಪೊಲೀಸ್ ಅಧಿಕಾರಿ ಪರಿಷ್ಕರಣಾ ಮೇಲ್ಮನವಿಗಳೊಂದಿಗೆ ನೀಡಿದ ನ್ಯಾಯಾಲಯದ ಒಂದು ಆದೇಶದಲ್ಲಿ ಈ ಕೆಳಗಿನಂತೆ ಮಾನ್ಯ ನ್ಯಾಯಾಲಯ ಉಲ್ಲೇಖಿಸಿದ್ದು ಕಂಡು ಬರುತ್ತದೆ.

"If the CW 24 to 26 are not recalled, it does not prejudice the case of the prosecution. Accordingly, I proceed to pass the following :

ORDER

Application filed under Section 311 of Code of Criminal Procedure by the Learned APP is hereby rejected."

ಈ ಪ್ರಕರಣದಲ್ಲಿ ಆರೋಪಿತ ಪೊಲೀಸ್ ಅಧಿಕಾರಿ CW25 ಆಗಿದ್ದು, ಈ ಮೇಲಿನ ಉಲ್ಲೇಖ ಇವರಿಗೆ ಅನ್ವಯವಾಗುತ್ತದೆ.

3. ಅದರಂತೆ ಪರಿಷ್ಕರಣಾ ಮೇಲ್ಮನವಿದಾರರು ನೀಡಿರುವ ಕೆಲವು ದಾಖಲೆಗಳಿಂದ ಅವರು ಬಂದೋಬಸ್ತ ಕರ್ತವ್ಯದಲ್ಲಿ ಇದ್ದಾಗ ಅವರಿಗೆ ದಿನಾಂಕ : 28-10-2010, 14-02-2011, 16-02-2011, 16-09-2011 ರಂದು ಸಾಕ್ಷಿ ನುಡಿಯಲು ಹಾಜರಾಗುವ ಬಗ್ಗೆ ಅವರಿಗೆ ಸಮನ್ಸ್ ಜಾರಿಯಾಗಿಲ್ಲ ಎಂಬುದು ಸ್ಪಷ್ಟವಾಗುತ್ತದೆ.

ಈ ಮೇಲಿನ ಕಾರಣಗಳಿಂದ ಆರೋಪಿತ ಪೊಲೀಸ್ ಅಧಿಕಾರಿ ಪ್ರಸ್ತುತ ಪ್ರಕರಣದಲ್ಲಿ ತನಿಖಾಧಿಕಾರಿಗಳಿಂದ ಸಾಕ್ಷಿ ನೀಡುವ ಬಗ್ಗೆ 2ನೇ ಜೆಎಂಎಫ್‌ಸಿ ನ್ಯಾಯಾಲಯ, ಬೆಳಗಾವಿ ಇಲ್ಲಿ ದೋಷರೋಪಣಾ ಪಟ್ಟಿಯಲ್ಲಿ ತೋರಿಸಿದಂತೆ ಆಯಾ ದಿನಗಳಂದು ಸಾಕ್ಷಿ ನುಡಿಯಲು ಹಾಜರಾಗಿಲ್ಲ ಎಂಬುದು ಕಂಡು ಬರುವುದಿಲ್ಲ. ಈ ಹಿನ್ನಲೆಯಲ್ಲಿ ಅರ್ಜಿದಾರರ ಪರಿಷ್ಕರಣ ಮೇಲ್ಮನವಿಯನ್ನು ಪುರಸ್ಕರಿಸಿ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನಾದೇಶವನ್ನು ರದ್ದುಪಡಿಸುವ ಕುರಿತಂತೆ ಮೇಲೆ ಓದಲಾದ (4)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 68 ಪೊಸಿಅ 2014, ಬೆಂಗಳೂರು, ದಿನಾಂಕ : 19-12-2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಿ.ಎಂ. ದೇಸೂರ, ಡಿವೈಎಸ್.ಪಿ., ಜಮಖಂಡಿ ಉಪ ವಿಭಾಗ, ಜಮಖಂಡಿ, ಬಾಗಲಕೋಟೆ ಜಿಲ್ಲೆ ಇವರಿಗೆ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆಯನ್ನು ರದ್ದುಪಡಿಸಿ ಅರ್ಜಿದಾರರನ್ನು ದೋಷಮುಕ್ತರನ್ನಾಗಿ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 24**

**ಜೆ.ಡಿ. ಮಧುಚಂದ್ರ ತೇಜಸ್ವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಹೆಚ್.ಡಿ. ಕೆಂಚಪ್ಪ, ಪಿಸಿ-31, ಕೆಎಸ್‌ಆರ್‌ಪಿ ತರಬೇತಿ ಶಾಲೆ, ಮುನಿರಾಬಾದ್, ಕೊಪ್ಪಳ ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಪ್ರಾಂಶುಪಾಲರು, ಕೆ.ಎಸ್.ಆರ್.ಪಿ. ತರಬೇತಿ ಶಾಲೆ, ಮುನಿರಾಬಾದ್, ಕೊಪ್ಪಳ ಇವರ ಆದೇಶ ಸಂಖ್ಯೆ: ಸಿಬ್ಬಂದಿ(1)/ಡಿ.ಇ./123/2013, ದಿನಾಂಕ : 17-07-2013.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ ಮೀಸಲು ಪೊಲೀಸ್, ಬೆಂಗಳೂರು ಇವರ ಆದೇಶ ಸಂಖ್ಯೆ ಅಪೀಲು/07/2013-14, ದಿನಾಂಕ : 25-11-2013.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ : 27-01-2014.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು(2)84/2013-14, ದಿನಾಂಕ : 06-09-2014.
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ : ಪಿಎಸ್‌ಸಿ 196 ಸಿಎನ್‌ಎಸ್ 2014, ದಿನಾಂಕ : 04-12-2014.

**ಪ್ರಸ್ತಾವನೆ :**

ಶ್ರೀ ಹೆಚ್.ಡಿ. ಕೆಂಚಪ್ಪ, ಪಿಸಿ-31, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕೆಎಸ್‌ಆರ್‌ಪಿ ತರಬೇತಿ ಶಾಲೆ, ಮುನಿರಾಬಾದ್, ಕೊಪ್ಪಳ ಜಿಲ್ಲೆ ದಿನಾಂಕ : 03-04-2013 ರಂದು ಸಂಜೆ 17-00 ಗಂಟೆಗೆ ಶಸ್ತ್ರಾಸ್ತ್ರ ಪಹರೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿ ಕರ್ತವ್ಯದಲ್ಲಿ ಬೇಜವಾಬ್ದಾರಿತನ. ಅಶಿಸ್ತು, ಅಜಾಗರೂಕತೆ ಹಾಗೂ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :–**

1. ಶ್ರೀ ಸುಬ್ರಮಣಿ ಆರ್. ಹೆಚ್‌ಸಿ–10, ಗಾರ್ಡ್ ಕಮಾಂಡರ್‌ರವರು ನೀವು ದಿನಾಂಕ : 03–04–2013ರಂದು ಸಂಜೆ 17–00 ಗಂಟೆಗೆ ಶಸ್ತ್ರಾಲಯ ಪಹರೆ ಕರ್ತವ್ಯಕ್ಕೆ ಗೈರು ಹಾಜರಾಗಿರುತ್ತೀರಿ ಎಂದು ವರದಿ ಸಲ್ಲಿಸಿರುತ್ತಾರೆ.
2. ಶ್ರೀ ಹೆಚ್. ರಾಮಪ್ಪ, ಸ್ಪೆ.ಆರ್.ಎಸ್.ಐ. ಕರ್ತವ್ಯದ ಅಧಿಕಾರಿಯವರು ನೀವು ದಿನಾಂಕ : 03–04–2013ರಂದು ಸಂಜೆ 17–00 ಗಂಟೆಗೆ ಪಹರೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿರುತ್ತೀರಿ ಎಂದು ವರದಿ ಸಲ್ಲಿಸಿರುತ್ತಾರೆ.
3. ಪಿಸಿ–31, ಹೆಚ್.ಡಿ. ಕೆಂಚಪ್ಪ, ಕೆ.ಎಸ್.ಆರ್.ಪಿ. ತರಬೇತಿ ಶಾಲೆ, ಆದ ನಿಮಗೆ ದಿನಾಂಕ : 03–04–2013ರಂದು ಶಸ್ತ್ರಾಲಯ ಪಹರೆ ಕರ್ತವ್ಯಕ್ಕೆ ನೇಮಕ ಮಾಡಿ ಮುಂಜಾನೆ 10.00 ಗಂಟೆಯ ವೇಳೆಗೆ ಬಿಟ್ಟಿದ್ದರೂ ಸಹಾ ಸೂಕ್ಷ್ಮ ಹಾಗೂ ನಿಷಿದ್ಧ ಪ್ರದೇಶದಲ್ಲಿ ಎಲ್ಲರೂ 24 ಗಂಟೆ ಜಾಗರೂಕರಾಗಿ ಕರ್ತವ್ಯ ನಿರ್ವಹಿಸುವ ಸ್ಥಳದಲ್ಲಿ ನೀವು ರೈಫಲ್ ತೆಗೆಯದೇ ಪಹರೆ ಕರ್ತವ್ಯಕ್ಕೆ ಗೈರು ಹಾಜರಾಗಿರುತ್ತೀರಿ. ಇತ್ತೀಚೆಗೆ ಸಿ.ಆರ್.ಪಿ.ಎಫ್. ಕ್ಯಾಂಪಿನ ಮೇಲೆ ಉಗ್ರಗಾಮಿಗಳು ದಾಳಿ ನಡೆಸಿ ಸುಮಾರು 4–5 ಜನ ಸಿಬ್ಬಂದಿಗಳನ್ನು ಹತ್ಯೆ ಮಾಡಿದ ಉದಾಹರಣೆಗಳು ಇದ್ದರೂ ಕೂಡಾ ಜವಾಬ್ದಾರಿ ಅರಿತು ಪೊಲೀಸ್ ಸಿಬ್ಬಂದಿಗಳು ಎಚ್ಚರಿಕೆ ವಹಿಸಿ ಕರ್ತವ್ಯ ನಿರ್ವಹಿಸುವ ಬದಲು ಅಜಾಗೃತರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ ಎಂದು ನಿಮ್ಮನ್ನು ಇಲಾಖೆ ವಿಚಾರಣೆಗೆ ಒಳಪಡಿಸಿ ಶಿಸ್ತಿನ ಕ್ರಮ ಕೈಗೊಳ್ಳಲು ಮುಖ್ಯ ಕವಾಯತು ಬೋಧಕರು, ಕೆ.ಎಸ್.ಆರ್.ಪಿ. ತರಬೇತಿ ಶಾಲೆ, ಮುನಿರಾಬಾದ್‌ರವರು ವರದಿಯಲ್ಲಿ ಕೋರಿಕೊಂಡಿರುತ್ತಾರೆ."

ಮೇಲಿನ ಆರೋಪಗಳ ವಿರುದ್ಧ ಪೂರ್ವಭಾವಿ ವಿಚಾರಣೆ ನಡೆಸಿ, ಆರೋಪ ಸಾಬೀತಾಗಿದೆಯೆಂದು ವಿಚಾರಣಾಧಿಕಾರಿಗಳು ವರದಿ ನೀಡಿದ್ದು, ಆ.ಪೊ.ಆ.ಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿದ್ದು. ಸಮಜಾಯಿಷಿಯನ್ನು ಒಪ್ಪದ ಶಿಸ್ತು ಪ್ರಾಧಿಕಾರ ಹಾಗು ಪ್ರಾಂಶುಪಾಲರು, ಕೆ.ಎಸ್.ಆರ್.ಪಿ. ತರಬೇತಿ ಶಾಲೆ, ಮುನಿರಾಬಾದ್, ಕೊಪ್ಪಳ ಇವರು ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ : 17–07–2013ರ ಆದೇಶದಲ್ಲಿ ಸದರಿಯವರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗದಂತೆ ಒಂದು ವರ್ಷ ಕಾಲ ಮುಂದೂಡಿ. ದಿನಾಂಕ : 03–04–2013ರಿಂದ ದಿನಾಂಕ : 04–04–2013 ರವರೆಗಿನ ಎರಡು ದಿನ ಗೈರು ಹಾಜರಿ ಎಂದು ಪರಿಗಣಿಸಿ ದಿನಾಂಕ : 05–04–2013 ರಿಂದ ದಿನಾಂಕ : 01–05–2013ರವರೆಗೆ 27 ದಿವಸಗಳನ್ನು ಸದರಿಯವರ ಹಕ್ಕಿನಲ್ಲಿರುವ ಗಳಿಕೆ ರಜೆ ಎಂದು ಮಂಜೂರು ಮಾಡಿ ಆದೇಶಿಸಿದೆ.

ಶಿಸ್ತು ಪ್ರಾಧಿಕಾರದ ಆದೇಶದ ವಿರುದ್ಧ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ ಮೀಸಲು ಪೊಲೀಸ್, ಬೆಂಗಳೂರು ಇವರ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ : 25–11–2013ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪ್ರಸ್ತುತ ಪ್ರಕರಣದಲ್ಲಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮ 6ರಡಿಯಲ್ಲಿ ದೋಷಾರೋಪಣೆಯನ್ನು ಹೊರಡಿಸಿದ ಪಕ್ಷದಲ್ಲಿ ಸದರಿ ನಿಯಮದಂತೆ ವಿಚಾರಣಾಧಿಕಾರಿಗಳನ್ನು ನೇಮಕ ಮಾಡಿ ಸದರಿ ಆಪಾದನೆಗಳ ಬಗ್ಗೆ ಕೂಲಂಕಷವಾಗಿ ತನಿಖೆಯನ್ನು ನಡೆಸಿ, ತದನಂತರ, ಶಿಕ್ಷೆಯನ್ನು ವಿಧಿಸಬೇಕಾಗಿತ್ತು. ಆದರೆ ಸದರಿ ಪ್ರಕರಣದಲ್ಲಿ ಶಿಸ್ತು ಪ್ರಾಧಿಕಾರವು ಈ ರೀತಿಯ ಯಾವುದೇ ಕ್ರಮವನ್ನು ಕೈಗೊಳ್ಳದೇ ಏಕಾಏಕಿ ಸದರಿಯವರ ವಿರುದ್ಧದ ಆಪಾದನೆಯು ಸಾಬೀತಾಗಿದೆ ಎಂಬ ತೀರ್ಮಾನಕ್ಕೆ ಬಂದು ಅವರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗದಂತೆ ಒಂದು ವರ್ಷ ಕಾಲ ಮುಂದೂಡಿ ದಂಡನೆ ವಿಧಿಸಿರುವುದು ಸರಿಯಾದ ಕ್ರಮವಲ್ಲ ಈ ರೀತಿಯ ವಿಚಾರಣೆಯನ್ನು ನಡೆಸದೇ ದಂಡನೆಯನ್ನು ವಿಧಿಸಬೇಕಾದಲ್ಲಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮ 7ರಡಿಯಲ್ಲಿ ದೋಷಾರೋಪಣೆಯನ್ನು ಹೊರಡಿಸಿ ಅವರಿಂದ ವಿವರಣೆಯನ್ನು ಪಡೆದ ನಂತರ ಶಿಸ್ತು ಪ್ರಾಧಿಕಾರವೇ ದಂಡನೆಯನ್ನು ವಿಧಿಸಲು ಅವಕಾಶವಿದೆ. ಆದುದರಿಂದ, ಶಿಸ್ತು ಪ್ರಾಧಿಕಾರವು ಸದರಿಯವರ ಪ್ರಕರಣದಲ್ಲಿ ವಿಚಾರಣೆಯನ್ನು ನಡೆಸದೇ ನೇರವಾಗಿ ದಂಡನೆಯನ್ನು ವಿಧಿಸಿರುವುದು ನಿಯಮಕ್ಕೆ ವಿರುದ್ಧವಾಗಿರುತ್ತದೆ. ಆರೋಪಿತ ಸಿಬ್ಬಂದಿಯು ನೀಡಿರುವ ವಿವರಣೆಯಲ್ಲಿ ತಾವು ಕರ್ತವ್ಯಕ್ಕೆ ಬರುವಾಗ ಎದುರುಗಡೆ ಬರುವ ಕಾರ್‌ಗೆ ಅಪಘಾತವಾಗಿ ನಂತರ ಕಾರಿನಲ್ಲಿದ್ದ ಜನರು ಅಪಘಾತದ ವಿಷಯ ದೂರವಾಣಿ ಮೂಲಕ ತಿಳಿಸಿ, ಈ ಹಿನ್ನಲೆಯಲ್ಲಿ ಅಂಬ್ಯೂಲೆನ್ಸ್‌ನಲ್ಲಿ ಸರ್ಕಾರಿ ಆಸ್ಪತ್ರೆ ಮುನಿರಾಬಾದ್‌ಗೆ ಕರೆದುಕೊಂಡು ಹೋಗಿರುವುದಾಗಿ ತಿಳಿಸಿದ್ದಾರೆ. ಅವರು ನೀಡಿರುವ ದಾಖಲಾತಿಗಳನ್ನು ಮತ್ತು ವೈದ್ಯಾಧಿಕಾರಿಗಳ ದೃಢೀಕರಣವನ್ನು ಮತ್ತು ಅವರಿಗೆ ಅಪಘಾತವಾಗಿರುವ ಫೋಟೋಗಳನ್ನು ಪರಿಶೀಲಿಸಲಾಗಿ ಪ್ರಕರಣವು ಸತ್ಯದಿಂದ ಕೂಡಿರುವುದಾಗಿ ಕಂಡು ಬರುತ್ತದೆ. ಈ ಹಿನ್ನಲೆಯಲ್ಲಿ ಶಿಸ್ತುಪ್ರಾಧಿಕಾರವು ನೀಡಿರುವ ದಂಡನಾದೇಶವನ್ನು ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 14 ಪೊಸಿಅ 2014, ಬೆಂಗಳೂರು, ದಿನಾಂಕ : 19–12–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್.ಡಿ. ಕೆಂಚಪ್ಪ, ಪಿಸಿ–31, ಕೆಎಸ್‌ಆರ್‌ಪಿ ತರಬೇತಿ ಶಾಲೆ, ಮುನಿರಾಬಾದ್, ಕೊಪ್ಪಳ ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯನ್ನು ಪುರಸ್ಕರಿಸಿ ಶಿಸ್ತು ಪ್ರಾಧಿಕಾರದ ದಂಡನೆಯನ್ನು ರದ್ದುಪಡಿಸಿ ಆ.ಪೊ.ಅ.ಯನ್ನು ನಿರ್ದೋಷಿ ಎಂದು ಪರಿಗಣಿಸಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

P.R. 25

ಜೆ.ಡಿ. ಮಧುಚಂದ್ರ ತೇಜಸ್ವಿ
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

## ಕಾನೂನು ಸಚಿವಾಲಯ

**ವಿಷಯ :** ಜಗಳೂರು ಕಂದಾಯ ತಾಲ್ಲೂಕು, ದಾವಣಗೆರೆ ಜಿಲ್ಲೆ ಇಲ್ಲಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವ ಬಗ್ಗೆ

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಲಾ 68 ಎಲ್‌ಸಿಎಲ್ 2014, ದಿನಾಂಕ : 22–04–2014.
2. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ದಾವಣಗೆರೆ ಜಿಲ್ಲೆ ರವರ ಪತ್ರ ದಿನಾಂಕ : 09–09–2014.
3. ಜಿಲ್ಲಾಧಿಕಾರಿಗಳ ಕಾರ್ಯಾಲಯ, ದಾವಣಗೆರೆ ಜಿಲ್ಲೆರವರ ಪತ್ರ ದಿನಾಂಕ : 10–10–2014.

**ಪ್ರಸ್ತಾವನೆ :**

ಸರ್ಕಾರವು ರಾಜ್ಯದ ಎಲ್ಲಾ ಕಂದಾಯ ತಾಲ್ಲೂಕುಗಳಿಗೆ ಒಂದೊಂದು ನೋಟರಿ ಹುದ್ದೆಯನ್ನು ಸೃಜಿಸಲು ತೀರ್ಮಾನಿಸಿದ್ದು. ಅದರಂತೆ ಮೇಲೆ ಓದಲಾದ (1)ರ ದಿನಾಂಕ : 22–04–2014ರ ಪತ್ರದಲ್ಲಿ ದಾವಣಗೆರೆ ಜಿಲ್ಲೆಯ ಜಗಳೂರು ಕಂದಾಯ ತಾಲ್ಲೂಕಿನಲ್ಲಿ ಹಾಲಿ ಇರುವ 02 ನೋಟರಿಗಳಿಗೆ ಹೆಚ್ಚಿನ ಕೆಲಸದ ಒತ್ತಡವಿರುವ ಬಗ್ಗೆ ಹಾಗೂ ಇನ್ನೂ ಹೆಚ್ಚುವರಿ ಹುದ್ದೆಗಳನ್ನು ಸೃಜಿಸುವ ಅವಶ್ಯಕತೆ ಇದೆಯೇ ಎಂಬ ಬಗ್ಗೆ ಸಮರ್ಥನೀಯ ವಿವರಣೆಯನ್ನು ಒದಗಿಸುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ದಾವಣಗೆರೆ ಜಿಲ್ಲೆ ಮತ್ತು ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ ಇವರುಗಳನ್ನು ಕೋರಲಾಗಿತ್ತು.

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ದಾವಣಗೆರೆ ಜಿಲ್ಲೆ ಇವರು ಮೇಲೆ ಓದಲಾದ (2)ರ ದಿನಾಂಕ : 09–09–2014ರ ಪತ್ರದಲ್ಲಿ ನೋಟರಿಗಳಿಗೆ ಸಂಬಂಧಪಟ್ಟಂತೆ 2013ನೇ ಸಾಲಿನ ತಪಾಸಣಾ ವರದಿಯನ್ನು ಆಧರಿಸಿ ಹಾಲಿ ಇರುವ ನೋಟರಿಗಳಿಗೆ ಕೆಲಸದ ಒತ್ತಡವನ್ನು ಅಂಕಿ ಅಂಶಗಳ ಸಹಿತ ಪರಿಶೀಲಿಸಿ, ಸದರಿ ತಾಲ್ಲೂಕಿನಲ್ಲಿ ಹಾಲಿ ಇರುವ ನೋಟರಿಗಳು ಸಂಖ್ಯೆ ಮತ್ತು ಜನ ಸಂಖ್ಯೆಯ ಅನುಪಾತದ ಆಧಾರದ ಮೇಲೆ ಹೋಲಿಸಿದರೆ ಕಡಿಮೆಯಾಗಿರುವುದರಿಂದ, ಸದರಿ ಜಗಳೂರು ಕಂದಾಯ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವ ಅವಶ್ಯಕತೆಯಿದೆ ಎಂದು ವರದಿ ನೀಡಿರುತ್ತಾರೆ.

ಅದರಂತೆ, ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ ಇವರು ತಹಶೀಲ್ದಾರರು, ಜಗಳೂರು ತಾಲ್ಲೂಕು ವರದಿಯನ್ನು ಲಗತ್ತಿಸಿ, ಮೇಲೆ ಓದಲಾದ (3)ರ ದಿನಾಂಕ : 10–10–2014 ರ ಪತ್ರದಲ್ಲಿ ಜಗಳೂರು ಕಂದಾಯ ತಾಲ್ಲೂಕಿನಲ್ಲಿ ಕೆಲಸ ನಿರ್ವಹಿಸುತ್ತಿರುವ ನೋಟರಿಗಳಿಗೆ ಹೆಚ್ಚಿನ ಕೆಲಸ ಒತ್ತಡವಿರುವುದರಿಂದ, ಸದರಿ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವಂತೆ ಕೋರಿರುತ್ತಾರೆ.

ಮೇಲಿನ ವರದಿಗಳನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಲಾ 68 ಎಲ್‌ಸಿಎಲ್ 2014, ಬೆಂಗಳೂರು, ದಿನಾಂಕ : 19–12–2014.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ದಾವಣಗೆರೆ ಜಿಲ್ಲೆಯ ಜಗಳೂರು ಕಂದಾಯ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸಲಾಗಿದೆ.

P.R. 26
SC-25

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ. ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಕಾನೂನು ಇಲಾಖೆ, (ಆಡಳಿತ–2).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಪಿ.ಆರ್. ಲಕ್ಷ್ಮೀನಾರಾಯಣ, ಆಪ್ತ ಕಾರ್ಯದರ್ಶಿ (ಗ್ರೇಡ್–1), ಸರ್ಕಾರದ ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆ, ಕನ್ನಡ ಸಂಸ್ಕೃತಿ ಮತ್ತು ವಾರ್ತಾ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, ಇವರಿಗೆ ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :**
1. ಶ್ರೀ ಪಿ.ಆರ್. ಲಕ್ಷ್ಮೀನಾರಾಯಣ, ಆಪ್ತ ಕಾರ್ಯದರ್ಶಿ (ಗ್ರೇಡ್–1), ಸರ್ಕಾರದ ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆ, ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, ಇವರ ಮನವಿ ದಿನಾಂಕ : 01–09–2014.
2. ಮಹಾಲೇಖಪಾಲರ ಪತ್ರ ಸಂಖ್ಯೆ : PV-13/R-1/SRV-93/2014–15/85, ದಿನಾಂಕ : 19–11–2014.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಮನವಿಯಲ್ಲಿ ಶ್ರೀ ಪಿ.ಆರ್. ಲಕ್ಷ್ಮೀನಾರಾಯಣ, ಆಪ್ತ ಕಾರ್ಯದರ್ಶಿ (ಗ್ರೇಡ್–1), ಸರ್ಕಾರದ ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆ, ಕನ್ನಡ ಸಂಸ್ಕೃತಿ ಮತ್ತು ವಾರ್ತಾ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, ಇವರು ವೈಯುಕ್ತಿಕ ಕಾರಣಗಳಿಂದಾಗಿ ದಿನಾಂಕ : 30–11–2014 ರಿಂದ ಜಾರಿಗೆ ಬರುವಂತೆ ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡುವಂತೆ ಕೋರಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಮಹಾಲೇಖಪಾಲರ ಪತ್ರದಲ್ಲಿ ಸದರಿ ಅಧಿಕಾರಿಯವರ ಸೇವಾ ಪುಸ್ತಕವನ್ನು ಪರಿಶೀಲಿಸಿ, ದಿನಾಂಕ : 30–06–2014ಕ್ಕೆ ಅಧಿಕಾರಿಯವರು 36 ವರ್ಷ, 5 ತಿಂಗಳು ಹಾಗೂ 18 ದಿನಗಳ ಅರ್ಹತಾದಾಯಕ ಸೇವೆಯನ್ನು ಪೂರ್ಣಗೊಳಿಸಿದ್ದಾರೆಂದು ದೃಢೀಕರಿಸಿರುತ್ತಾರೆ. ಸದರಿ ಅಧಿಕಾರಿಯವರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು, ಸದರಿ ಅಧಿಕಾರಿಯವರಿಗೆ ಸರ್ಕಾರಿ ಸೇವೆಯಿಂದ ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡಲು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 349 ಸಲುಸೇ 2014, ಬೆಂಗಳೂರು, ದಿನಾಂಕ : 17ನೇ ಡಿಸೆಂಬರ್, 2014.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಪಿ.ಆರ್. ಲಕ್ಷ್ಮೀನಾರಾಯಣ, ಆಪ್ತ ಕಾರ್ಯದರ್ಶಿ (ಗ್ರೇಡ್-1), ಸರ್ಕಾರದ ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆ, ಕನ್ನಡ ಸಂಸ್ಕೃತಿ ಮತ್ತು ವಾರ್ತಾ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958ರ ನಿಯಮ 285(1)(ಎ) ಅನ್ವಯ ದಿನಾಂಕ : 31-12-2014ರ ಅಪರಾಹ್ನದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 27**

**ಡಾ॥ ಗೀತಾ. ಎಲ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-6) (ಪ್ರ).

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀಮತಿ ವಿ. ಭಾಗ್ಯಲಕ್ಷ್ಮಿ, ಉಪ ನಿರ್ದೇಶಕರು, ಖಜಾನೆ ಇಲಾಖೆ ಅವರ ವಿರುದ್ಧ ಇಲಾಖಾ ವಿಚಾರಣೆ-ಆರೋಪ ಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ನೋಟೀಸ್ ಸಂಖ್ಯೆ : ಆಇ 242 ಆಖಇ 2010, 11-07-2011.
2. ಶ್ರೀಮತಿ ವಿ. ಭಾಗ್ಯಲಕ್ಷ್ಮಿ, ಉಪ ನಿರ್ದೇಶಕರು, ಖಜಾನೆ ಇಲಾಖೆ, ಅವರ ಉತ್ತರ ದಿನಾಂಕ : 28-07-2011

**ಪ್ರಸ್ತಾವನೆ :**

ದಾವಣಗೆರೆ ಜಿಲ್ಲಾ ಖಜಾನಾಧಿಕಾರಿ ಹುದ್ದೆಯಿಂದ ಬಡ್ತಿ ಮೇರೆಗೆ ವರ್ಗಾವಣೆಗೊಂಡ ಸಂಬಂಧ ದಾವಣಗೆರೆ ಜಿಲ್ಲಾ ಖಜಾನೆಯಲ್ಲಿ ಡ್ರಾ ಮಾಡಿದ ರೂ. 16,000/-ಗಳ ವರ್ಗಾವಣೆ ಮುಂಗಡವನ್ನು ನಿಯಮಾನುಸಾರ 6 ಕಂತುಗಳಲ್ಲಿ ಕಟಾಯಿಸಿ ಇಲ್ಲವೇ ಅಂತಿಮ ಕಂತಿನಲ್ಲಿ ಪೂರ್ತಿ ಮೊತ್ತವನ್ನು ಕಟಾಯಿಸಿ ತುಂಬಲುಕ್ರಮ ಕೈಗೊಳ್ಳದೇ ಡ್ರಾ ಮಾಡಿದ ವರ್ಗಾವಣೆ ಪ್ರಯಾಣ ಮುಂಗಡವನ್ನು ಮರು ಪಾವತಿಸದೇ KFC ಅನುಚ್ಛೇದ 234 ಅನ್ನು ಉಲ್ಲಂಘಿಸಿದ ಹಾಗೂ ಪೂರ್ಣ ಸಂಬಳದ ಭಾಗಂಶವನ್ನು ಎರಡು ಖಜಾನೆಗಳಲ್ಲಿ ಸೆಳೆದು KFC ಅನುಚ್ಛೇದ 80(ಸಿ) ಹಾಗೂ 85(ii) ಉಲ್ಲಂಘಿಸಿ ಆಡಿಟ್ ಆಕ್ಷೇಪಣೆಗೆ ಕಾರಣರಾದ ಆರೋಪಕ್ಕಾಗಿ ಶ್ರೀಮತಿ ವಿ. ಭಾಗ್ಯಲಕ್ಷ್ಮಿ, ಉಪ ನಿರ್ದೇಶಕರು, ಖಜಾನೆ ಇಲಾಖೆ ಅವರಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ : 11-07-2011ರ ನೋಟೀಸ್ ನೀಡಿ ಸಮಜಾಯಿಷಿ ಕೇಳಲಾಯಿತು.

ಅಧಿಕಾರಿಯು ಮೇಲೆ (2)ರಲ್ಲಿ ಓದಲಾದ ದಿನಾಂಕ : 28-07-2011ರ ಉತ್ತರ ಸಲ್ಲಿಸಿ ತಾವು ವರ್ಗಾವಣೆ ಮುಂಗಡ ಹಾಗೂ ವರ್ಗಾವಣೆ ಪ್ರಯಾಣ ಮುಂಗಡ ಡ್ರಾ ಮಾಡಿದ್ದನ್ನು ದಾವಣಗೆರೆ ಜಿಲ್ಲಾ ಖಜಾನೆಯಿಂದ ನೀಡಲ್ಪಟ್ಟ ಅಂತಿಮ ವೇತನ ಪತ್ರದಲ್ಲಿ ಉಲ್ಲೇಖಿಸದ ಕಾರಣ ಅದನ್ನು ವರ್ಗಾವಣೆ ನಂತರ ಕಟಾಯಿಸಿ ತುಂಬುವ ಸಂದರ್ಭ ಒದಗಿ ಬರಲಿಲ್ಲ. ಈ ಕಾರಣದಿಂದಾಗಿ ತಮ್ಮಿಂದ ಯಾವುದೇ ನಿಯಮದ ಉಲ್ಲಂಘನೆ ಆಗದಿರುವುದರಿಂದ ತಮ್ಮನ್ನು ಆರೋಪ ಮುಕ್ತರನ್ನಾಗಿಸಲು ಕೋರಿದ್ದಾರೆ.

ಆರೋಪಿ ಅಧಿಕಾರಿಯ ಉತ್ತರವನ್ನು ಪರಿಶೀಲಿಸಲಾಗಿ ಅವರ ವರ್ಗಾವಣೆ ಮುಂಗಡ ಹಾಗೂ ವರ್ಗಾವಣೆ ಪ್ರಯಾಣ ಮುಂಗಡ ಕುರಿತಂತೆ ಅಂತಿಮ ವೇತನ ಪತ್ರದಲ್ಲಿ ನಮೂದಿಸಿರಲಿಲ್ಲ ಎಂಬುದನ್ನು ಒಪ್ಪಿಕೊಳ್ಳುತ್ತದೆ. ಆದರೆ ಒಂದೇ ತಿಂಗಳ ವೇತನವನ್ನು ಭಾಗವಾಗಿ ಎರಡೆರಡು ಖಜಾನೆಗಳಲ್ಲಿ ಅದು ಒಂದೇ ಇಲಾಖೆಯಲ್ಲಿ ಸೆಳೆಯುವುದು ಕೆಎಫ್‌ಸಿ ಅನುಚ್ಛೇದ 80(ಸಿ)ರ ಉಲ್ಲಂಘನೆ ಆಗುತ್ತದೆ. ಆರೋಪಿತರ ಕ್ರಮದಿಂದ ಆರ್ಥಿಕ ನಷ್ಟ ಉಂಟಾಗಿಲ್ಲ. ಈ ಅಂಶಗಳನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 242 ಆಖಇ 2010, ಬೆಂಗಳೂರು, ದಿನಾಂಕ : 12-12-2014.**

ಸರ್ಕಾರವು ಶ್ರೀಮತಿ ವಿ. ಭಾಗ್ಯಲಕ್ಷ್ಮಿ, ಉಪ ನಿರ್ದೇಶಕರು, ಖಜಾನೆ ಇಲಾಖೆ ಅವರನ್ನು ದಿನಾಂಕ : 11-07-2011ರ ನೋಟೀಸ್‌ನಲ್ಲಿ ಮಾಡಲಾದ ಆರೋಪಗಳಿಂದ ಮುಕ್ತರನ್ನಾಗಿಸುತ್ತದೆ. ಈ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 28**

**ಎನ್. ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ).

## ಒಳಾಡಳಿತ ಸಚಿವಾಲಯ

**ವಿಷಯ :** ಸಿಟಿ ಸಿವಿಲ್ ನ್ಯಾಯಾಲಯ ಬೆಂಗಳೂರು ಇಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೊಲೀಸ್ ನಡುವೆ ನಡೆದ ಘರ್ಷಣೆ ಕುರಿತು ನ್ಯಾ.ಮೂ. ಶ್ರೀ ಆರ್.ಜಿ. ವೈದ್ಯನಾಥ ವಿಚಾರಣಾ ಆಯೋಗದ ಮುಂದೆ ಸರ್ಕಾರದ ಪರವಾಗಿ ವಾದ ಮಂಡಿಸಿದ ಶ್ರೀ ಜಿ.ಕೆ. ಬೇಕಲ್, ವಕೀಲರು (ನಿವೃತ್ತ ಉಪ ಪೊಲೀಸ್ ಆಯುಕ್ತರು) ಬೆಂಗಳೂರು ಇವರಿಗೆ ಸಂಭಾವನೆ ಮಂಜೂರು ಮಾಡುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ : ಹೆಚ್‌ಡಿ 4 ಪಿಸಿಇ 2012, ದಿನಾಂಕ : 09-03-2012.
2. ದಿನಾಂಕ : 13-08-2012ರ ಸರ್ಕಾರದ ಅಧಿಸೂಚನೆ ಸಂಖ್ಯೆ : ಹೆಚ್‌ಡಿ 11 ಪಿಸಿಇ 2012.
3. ಶ್ರೀ ಜಿ.ಕೆ. ಬೇಕಲ್, ವಕೀಲರು, ನಿವೃತ್ತ ಉಪ ಪೊಲೀಸ್ ಆಯುಕ್ತರು, ಬೆಂಗಳೂರು ಇವರ ಮನವಿ ದಿನಾಂಕ : 08-12-2014.

**ಪ್ರಸ್ತಾವನೆ :**

ದಿನಾಂಕ : 02–03–2012 ರಂದು ಬೆಂಗಳೂರು ನಗರದ ಸಿವಿಲ್ ನ್ಯಾಯಾಲಯದ ಆವರಣದಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೊಲೀಸ್ ನಡುವೆ ನಡೆದ ಘಟನೆಯ ಕುರಿತು ಕೂಲಂಕಷವಾಗಿ ತನಿಖೆ ನಡೆಸಲು ನ್ಯಾಯಮೂರ್ತಿ ಶ್ರೀ ಆರ್.ಜಿ. ವೈದ್ಯನಾಥ ಆಯೋಗವನ್ನು ಮೇಲೆ ಓದಲಾದ (1)ರ ಆದೇಶದಲ್ಲಿ ನೇಮಿಸಲಾಗಿದೆ.

ಶ್ರೀ ಜಿ.ಕೆ. ಬೇಕಲ್, ವಕೀಲರು, (ನಿವೃತ್ತ ಉಪ ಪೊಲೀಸ್ ಆಯುಕ್ತರು) ಬೆಂಗಳೂರು ಅವರನ್ನು ನ್ಯಾಯಮೂರ್ತಿ ಶ್ರೀ ಆರ್.ಜಿ. ವೈದ್ಯನಾಥ ವಿಚಾರಣಾ ಆಯೋಗದ ಮುಂದೆ ಸರ್ಕಾರದ ಪರವಾಗಿ ವಾದಿಸಲು ಮೇಲೆ ಓದಲಾದ (2)ರ ಆದೇಶದಲ್ಲಿ ನೇಮಕ ಮಾಡಲಾಗಿದೆ.

ಶ್ರೀ ಜಿ.ಕೆ. ಬೇಕಲ್, ವಕೀಲರು, ಬೆಂಗಳೂರು ಇವರು ಸರ್ಕಾರದ ಪರವಾಗಿ ನವೆಂಬರ್ ತಿಂಗಳ ದಿನಾಂಕ : 24–11–2014, 25–11–2014, 27–11–2014 28–11–2014 ಮತ್ತು 29–11–2014 ಒಟ್ಟು 05 ಮಹತ್ವದ ದಿನಗಳು ವಾದಿಸಿದ ಸಲುವಾಗಿ, ಸಂಭಾವನೆಯಾಗಿ ದಿನವೊಂದಕ್ಕೆ ರೂ. 10,000/– ರಂತೆ 05 ದಿನಗಳಿಗೆ ರೂ. 50,000/–ಗಳ (ಐವತ್ತು ಸಾವಿರ ರೂಪಾಯಿಗಳು ಮಾತ್ರ) ಮೊತ್ತವನ್ನು ಮಂಜೂರು ಮಾಡುವಂತೆ ಮೇಲೆ ಓದಲಾದ (3)ರ ಪತ್ರದಲ್ಲಿ ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 11 ಪಿಸಿಇ 2012, ಬೆಂಗಳೂರು, ದಿನಾಂಕ : 10–12–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಜಿ.ಕೆ. ಬೇಕಲ್, ವಕೀಲರು, (ನಿವೃತ್ತ ಉಪ ಪೊಲೀಸ್ ಆಯುಕ್ತರು) ಬೆಂಗಳೂರು ಇವರಿಗೆ ಈ ಕೆಳಕಂಡಂತೆ ಸಂಭಾವನೆಯನ್ನು ಮಂಜೂರು ಮಾಡಲಾಗಿದೆ.

| ಕ್ರಮ ಸಂಖ್ಯೆ | ಸಂಭಾವನೆಯ ವಿವರ | ಮೊತ್ತ |
|---|---|---|
| 1. | Effective hearing (5 days) dated, 24-11-2014, 25-11-2014, 27-11-2014, 28-11-2014 & 29-11-2014 @ Rs. 10,000/- per day | 50,000.00 |
| | (ರೂಪಾಯಿ ಐವತ್ತು ಸಾವಿರಗಳು ಮಾತ್ರ) **ಒಟ್ಟು ಮೊತ್ತ** | **50,000.00** |

1. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2070–00–105–0–02–059 ವಿಶೇಷ ತನಿಖಾ ಆಯೋಗಗಳು" ಅಡಿಯಲ್ಲಿ ಭರಿಸತಕ್ಕದ್ದು. ಸದರಿ ಲೆಕ್ಕ ಶೀರ್ಷಿಕೆಯಡಿಯಲ್ಲಿ ಬಿಡುಗಡೆಯಾದ ಹಣವನ್ನು ಹಿಂಪಡೆದು ವಿತರಿಸಲು ಸರ್ಕಾರದ ಅಧೀನ ಕಾರ್ಯದರ್ಶಿ (ಕಾನೂನು ಮತ್ತು ಸುವ್ಯವಸ್ಥೆ), ಒಳಾಡಳಿತ ಇಲಾಖೆ ಇವರನ್ನು ಹಣ ಹಿಂಪಡೆಯುವ ಮತ್ತು ವಿತರಿಸುವ ಅಧಿಕಾರಯನ್ನಾಗಿ ನೇಮಿಸಲಾಗಿದೆ.
2. ಈ ಆದೇಶವನ್ನು ಆರ್ಥಿಕ ಇಲಾಖೆ ಆದೇಶ ಸಂಖ್ಯೆ : ಆಇ 3 ಟಿಎಫ್‌ಪಿ 2011, ದಿನಾಂಕ : 27–01–2012ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಿದ ರೀತ್ಯಾ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 29**

**SC-50**

**ಗೋವಿಂದಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ).

## ಕಾನೂನು ಸಚಿವಾಲಯ

**ವಿಷಯ :** ರಾಮನಗರ ಜಿಲ್ಲೆಯ ಚನ್ನಪಟ್ಟಣ ಕಂದಾಯ ತಾಲ್ಲೂಕಿನಲ್ಲಿ ಖಾಲಿಯಿರುವ ನೋಟರಿ ಹುದ್ದೆ ಭರ್ತಿ ಬಗ್ಗೆ. (ಶ್ರೀ ಬಿ. ವೆಂಕಟಪ್ಪ ಇವರ ನಿಧನದಿಂದ ತೆರವಾದ ಹುದ್ದೆ)

**ಓದಲಾಗಿದೆ :**

1. ಸರ್ಕಾರದ ಪತ್ರ ಸಂಖ್ಯೆ : ಲಾ 08 ಎಲ್‌ಸಿಎಲ್ 2014, ದಿನಾಂಕ : 22–01–2014.
2. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ರಾಮನಗರ ಜಿಲ್ಲೆ, ದಿನಾಂಕ : 03–07–2014.
3. ಸರ್ಕಾರದ ಪತ್ರ ಸಂಖ್ಯೆ : ಲಾ 08 ಎಲ್‌ಸಿಎಲ್ 2014, ದಿನಾಂಕ : 16–07–2014.
4. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ರಾಮನಗರ ಜಿಲ್ಲೆ, ದಿನಾಂಕ : 06–08–2014.
5. ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂಖ್ಯೆ : ಜಿಎಸ್‌ಆರ್ 114(ಎ) ದಿನಾಂಕ: 24–02–2009.
6. ಸಂದರ್ಶನ ಮಂಡಳಿ ರಚನೆ ಅಧಿಸೂಚನೆ ಸಂಖ್ಯೆ : ಲಾ 61 ಎಲ್‌ಸಿಎಲ್ 2009, ದಿನಾಂಕ : 24–07–2010 ಮತ್ತು ಲಾ 53 ಎಲ್‌ಸಿಎಲ್ 2013, ದಿನಾಂಕ : 23–7–2013 ಮತ್ತು ಲಾ 381 ಎಲ್‌ಸಿಎಲ್ 2014, ದಿನಾಂಕ : 25–11–2014.
7. ಸಂದರ್ಶನ ಸೂಚನಾ ಪತ್ರ ಸಂಖ್ಯೆ : ಲಾ 08 ಎಲ್‌ಸಿಎಲ್ 2014, ದಿನಾಂಕ : 29–10–2014.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ : 22–01–2014ರ ಸರ್ಕಾರದ ಪತ್ರದಲ್ಲಿ ಶ್ರೀ ಬಿ. ವೆಂಕಟಪ್ಪ, ನೋಟರಿ, ಚನ್ನಪಟ್ಟಣ, ಕಂದಾಯ ತಾಲ್ಲೂಕು ಇವರ ಮರಣ ಪ್ರಮಾಣ ಪತ್ರವನ್ನು ಒದಗಿಸುವುದರೊಂದಿಗೆ ಇವರ ನಿಧನದಿಂದ ತೆರವಾದ ಹುದ್ದೆಯನ್ನು ತುಂಬುವ ಅವಶ್ಯಕತೆ ಇದೆಯೇ ಎಂಬ ಬಗ್ಗೆ

ವರದಿ ಕೋರಲಾಗಿದ್ದು. ಅದರಂತೆ, ಓದಲಾದ (2)ರ ದಿನಾಂಕ : 03-07-2014ರ ಪ್ರಸ್ತಾವನೆಯಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ರಾಮನಗರ ಜಿಲ್ಲೆ ಇವರು ಸದರಿ ನಿಧನ ಹೊಂದಿರುವ ನೋಟರಿಯವರ ಮರಣ ಪ್ರಮಾಣ ಪತ್ರವನ್ನು ಒದಗಿಸುವುದರೊಂದಿಗೆ ಅವರ ನಿಧನದಿಂದ ತೆರವಾದ ಹುದ್ದೆಯನ್ನು ತುಂಬುವ ಅವಶ್ಯಕತೆ ಇದೆಯೆಂದು ವರದಿ ನೀಡಿರುತ್ತಾರೆ.

ಓದಲಾದ (3)ರ ಸರ್ಕಾರಿ ಪತ್ರದಲ್ಲಿ ಸದರಿ ಹುದ್ದೆಯನ್ನು ಭರ್ತಿ ಮಾಡಲು ಸ್ಥಳೀಯರಿಂದ ಅರ್ಜಿಗಳನ್ನು ಆಹ್ವಾನಿಸಿ ನೋಟರಿಗಳ ಅಧಿನಿಯಮ/ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳು 1977ರ ನಿಯಮ 12 ರಡಿಯಲ್ಲಿ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ರಾಮನಗರ ಜಿಲ್ಲೆ ಇವರನ್ನು ದಿನಾಂಕ : 16-07-2014 ರಂದು ಕೋರಲಾಗಿತ್ತು.

ಅದರಂತೆ, ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ರಾಮನಗರ ಜಿಲ್ಲೆ ಇವರು ಮೇಲೆ ಓದಲಾದ (4)ರಲ್ಲಿ ದಿನಾಂಕ : 06-08-2014ರ ಪ್ರಸ್ತಾವನೆಯೊಂದಿಗೆ 18 ಜನರ ಮೆಮೋರಿಯಲ್ಸ್‌ಗಳನ್ನೊಳಗೊಂಡ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಆ ಪ್ರಸ್ತಾವನೆಯನ್ನು ಮೇಲೆ ಓದಲಾದ (5)ರಲ್ಲಿ ನೋಟರಿಗಳ ತಿದ್ದುಪಡಿ ನಿಯಮಗಳು 2009ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ತಿದ್ದುಪಡಿ ನಿಯಮಗಳು 2009ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ಮೇಲೆ ಓದಲಾದ (6)ರ ಅಧಿಸೂಚನೆಗಳಲ್ಲಿ ರಚಿಸಿಲಾಗಿರುವ ಸಂದರ್ಶನ ಮಂಡಳಿಯ ಪರಿಶೀಲನೆಗೆ ಕಳುಹಿಸಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ ಹಾಜರಾಗುವಂತೆ ಮೇಲೆ ಓದಲಾದ (7)ರ ದಿನಾಂಕ : 29-10-2014ರಲ್ಲಿ ಸಂದರ್ಶನ ಸೂಚನಾ ಪತ್ರದಲ್ಲಿ ಸೂಚಿಸಲಾಗಿತ್ತು. ಅದರಂತೆ, ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ವರದಿ ಸಲ್ಲಿಸಿದೆ.

ಸಂದರ್ಶನ ಮಂಡಳಿಯ ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಲಾ 08 ಎಲ್‌ಸಿಎಲ್ 2014, ಬೆಂಗಳೂರು, ದಿನಾಂಕ : 19-12-2014.**

ನೋಟರಿಗಳ ಅಧಿನಿಯಮ, 1952 ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿಗಳ ನಿಯಮಗಳು, 1956 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ಪರಿಶೀಲಿಸಿ, ನಿಯಮ 8(1)ರಲ್ಲಿ ಪ್ರದತ್ತಗಾಗಿರುವ ಅಧಿಕಾರದನ್ವಯ ಶ್ರೀಮತಿ ಸುವರ್ಣಮ್ಮ ವೈಫ್ ಆಫ್ ಶ್ರೀ ಕೆ.ಟಿ. ತಿಮ್ಮೇಗೌಡ, ನಂ. 2179/2, 5ನೇ ಕ್ರಾಸ್, ಕುವೆಂಪುನಗರ, ಚನ್ನಪಟ್ಟಣ, ರಾಮನಗರ ಜಿಲ್ಲೆ-562 160 ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ರಾಮನಗರ ಜಿಲ್ಲೆಯ ಚನ್ನಪಟ್ಟಣ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06-ಇತರೆ ಬಾಬ್ತುಗಳಿಗೆ (0070-01-501-0-06) ನೋಟರಿ ನಿಯಮಗಳಲ್ಲಿ ನಿಗಧಿಪಡಿಸಲಾದ ರೂ. 1000-00 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ 1952ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜೆ. ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಕಾನೂನು ಇಲಾಖೆ (ಆಡಳಿತ-2).

**P.R. 30**
**SC-25**

## ತೋಟಗಾರಿಕಾ ಸಚಿವಾಲಯ

**ವಿಷಯ :** ಧಾರವಾಡ ತಾಲ್ಲೂಕು, ರಾಯಪುರ ಗ್ರಾಮದ ಸ.ನಂ. 30+201/9ದ 8ಎ-38 ಗುಂಟೆ ಜಮೀನನ್ನು ಅಬ್ದುಲ್ ನಜೀರ್ ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆ, ಮೈಸೂರು ಇವರಿಗೆ ಮಂಜೂರು ಮಾಡುವ ಕುರಿತು.

**ಓದಲಾಗಿದೆ :**
1. ಮಹಾನಿರ್ದೇಶಕರು, ಅಬ್ದುಲ್ ನಜೀರ್ ಸಾಬ್ ರಾಜ್ಯ ಗ್ರಾಮೀಣ ಅಭಿವೃದ್ಧಿ ಸಂಸ್ಥೆ ಇವರ ಪತ್ರ ಸಂಖ್ಯೆ: ರಾಗ್ರಸಂ.ಕಟ್ಟಡ.ಸಿಆರ್-01/2012-13, ದಿನಾಂಕ : 18-01-2014.
2. ಸರ್ಕಾರದ ಅಪರ ಮುಖ್ಯಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ : ಗ್ರಾಅಪ/84/ಗ್ರಾಪಂಅ/2014, ದಿನಾಂಕ : 13-02-2014.
3. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಇವರ ಪತ್ರ ಸಂಖ್ಯೆ : ರೇನಿ/ಸ್ಥಿಆಶಾ/ಜಮೀನು/ದಾ82/2014-15, ದಿನಾಂಕ : 24-07-2014.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ದಿನಾಂಕ : 18-01-2014ರ ಪತ್ರದಲ್ಲಿ ಧಾರವಾಡ ತಾಲ್ಲೂಕು ರಾಯಾಪುರ ಗ್ರಾಮದ ರಿ.ಸ.ನಂ. 30+201/9 ಕ್ಷೇತ್ರ 8 ಎಕರೆ-38 ಗುಂಟೆ ಸರ್ಕಾರಿ ಜಮೀನು ಸಹಾಯಕ ನಿರ್ದೇಶಕರು, ರೇಷ್ಮೆ ಇಲಾಖೆ, ಬೆಳಗಾವಿ ಇವರ ವಶದಲ್ಲಿದ್ದು, ಸದರಿ ಜಮೀನನ್ನು ಪ್ರಾದೇಶಿಕ ಕೇಂದ್ರದ ನಿರ್ಮಾಣಕ್ಕಾಗಿ ರೇಷ್ಮೆ ಇಲಾಖೆಯಿಂದ ಮರಳಿ ಪಡೆದು ಅಬ್ದುಲ್ ನಜೀರ್ ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆ, ಮೈಸೂರುರವರಿಗೆ ಹಸ್ತಾಂತರಿಸಬಹುದಾಗಿ ಜಿಲ್ಲಾಧಿಕಾರಿಗಳು, ಧಾರವಾಡ ಇವರು ಅಭಿಪ್ರಾಯಿಸಿರುತ್ತಾರೆ ಹಾಗೂ ಪ್ರಸ್ತಾಪಿತ ಜಮೀನನ್ನು ಅಬ್ದುಲ್ ನಜೀರ್ ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆಗೆ ಮಂಜೂರು ಮಾಡುವಂತೆ ಮಹಾನಿರ್ದೇಶಕರು, ಅಬ್ದುಲ್ ನಜೀರ್ ಸಾಬ್ ರಾಜ್ಯ ಗ್ರಾಮೀಣ ಅಭಿವೃದ್ಧಿ ಸಂಸ್ಥೆ ಇವರು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯನ್ನು ಕೋರಿಕೆ ಸಲ್ಲಿಸಿ ತೋಟಗಾರಿಕೆ ಮತ್ತು ರೇಷ್ಮೆ ಇಲಾಖೆಯನ್ನು ಸಹ ಕೋರಿರುತ್ತಾರೆ.

ಮೇಲೆ ಓದಲಾದ (2) ರ ದಿನಾಂಕ : 13–02–2014ರ ಅನಧಿಕೃತ ಟಿಪ್ಪಣಿಯಲ್ಲಿ ಧಾರವಾಡ ತಾಲ್ಲೂಕು, ರಾಯಾಪೂರ ಗ್ರಾಮದ ರಿ.ಸ. ನಂ. 30+201/9 ಕ್ಷೇತ್ರ 8 ಎಕರೆ 38 ಗುಂಟೆ ಸರ್ಕಾರಿ ಜಮೀನನ್ನು ನಿರ್ದೇಶಕರು, ಅಬ್ದುಲ್ ನಜೀರ್ ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆ, ಮೈಸೂರು ಇವರಿಗೆ ಮಂಜೂರು ಮಾಡುವಂತೆ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರು ಕೋರಿರುತ್ತಾರೆ.

ಮೇಲೆ ಓದಲಾದ (3)ರ ದಿನಾಂಕ : 24–07–2014ರ ಪತ್ರದಲ್ಲಿ ಧಾರವಾಡ ತಾಲ್ಲೂಕು ರಾಯಾಪುರ ಗ್ರಾಮದ ರಿ.ಸ.ನಂ. 30+201/9 ಒಟ್ಟು ಕ್ಷೇತ್ರ 12 ಎಕರೆ–36 ಗುಂಟೆ ಜಮೀನಿನ ರಸ್ತೆಯ ಬಲಭಾಗದಲ್ಲಿರುವ ರೇಷ್ಮೆ ಇಲಾಖೆಗೆ ಸೇರಿದ ಕ್ಷೇತ್ರ 8 ಎಕರೆ–38 ಗುಂಟೆ ಸರ್ಕಾರಿ ಜಮೀನು ಇದ್ದು, ರೇಷ್ಮೆ ಕೃಷಿ ಅಭಿವೃದ್ಧಿಗೆ ಉತ್ತರ ಕರ್ನಾಟಕದಲ್ಲಿ ಪೂರಕವಾದ ಇಲಾಖೆಯ ವಿವಿಧ ಸಂಸ್ಥೆಗಳ ಸಮುಚ್ಚಯಗಳೊಂದಿಗೆ ಸ್ಥಾಪಿತವಾಗಿದೆ. ಈ ಕಟ್ಟಡಗಳು ಹಾಗೂ 1–00 ಎಕರೆ ಹಿಪ್ಪುನೇರಳೆ ತೋಟ 12–36 ಎಕರೆ ಜಮೀನಿನ ಸಂಪೂರ್ಣ ವ್ಯಾಪ್ತಿಯನ್ನು ಅವರಿಸಿರುವುದರಿಂದ, ಈ ಕ್ಷೇತ್ರದಲ್ಲಿ ಉಳಿಯುವ 2–00 ಎಕರೆಯಷ್ಟು ಮಾತ್ರ ಖಾಲಿ ಜಾಗ ದೊರೆಯಬಹುದಾಗಿದ್ದು ಈ ಜಮೀನನ್ನು ಅಬ್ದುಲ್ ನಜೀರ್ ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆ ಮೈಸೂರು ಇವರಿಗೆ ಮಂಜೂರು ಮಾಡಬಹುದಾಗಿದೆ ಎಂದು ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಅಭಿಪ್ರಾಯ ನೀಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಧಾರವಾಡ ತಾಲ್ಲೂಕು, ರಾಯಾಪುರ ಗ್ರಾಮದ ರಿ.ಸ.ನಂ. 30+201/9ರಲ್ಲಿ ಖಾಲಿ ಇರುವ 3.26 ಎಕರೆ ಜಮೀನಿನ ಪೈಕಿ 2–00 ಎಕರೆ ಜಮೀನನ್ನು ರೇಷ್ಮೆ ಇಲಾಖೆಯಿಂದ ವಾಪಸು ಪಡೆದು ಅಬ್ದುಲ್ ನಜೀರ್ ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆ, ಮೈಸೂರು ಇವರಿಗೆ ಧಾರವಾಡ ತಾಲ್ಲೂಕಿನ, ರಾಯಾಪುರ ಗ್ರಾಮದಲ್ಲಿ ಪ್ರಾದೇಶಿಕ ಕಛೇರಿ ತೆರೆಯಲು ಹಸ್ತಾಂತರಿಸಲು ಸರ್ಕಾರವು ನಿರ್ಧರಿಸಿರುವ ಕಾರಣ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ತೋಇ 17 ರೇಯೋವಿ 2014, ಬೆಂಗಳೂರು, ದಿನಾಂಕ : 30–12–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಧಾರವಾಡ ತಾಲ್ಲೂಕು, ರಾಯಾಪುರ ಗ್ರಾಮದ ರಿ.ಸ.ನಂ. 30+201/9 ರಲ್ಲಿ ಖಾಲಿ ಇರುವ 3.26 ಎಕರೆ ಜಮೀನಿನ ಪೈಕಿ 2–00 ಎಕರೆ ಜಮೀನನ್ನು ರೇಷ್ಮೆ ಇಲಾಖೆಯಿಂದ ವಾಪಸು ಪಡೆದು ಅಬ್ದುಲ್ ನಜೀರ್ ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆ, ಮೈಸೂರು ಇವರಿಗೆ ಧಾರವಾಡ ತಾಲ್ಲೂಕಿನ, ರಾಯಾಪುರ ಗ್ರಾಮದಲ್ಲಿ ಪ್ರಾದೇಶಿಕ ಕಛೇರಿ ತೆರೆಯಲು ಹಸ್ತಾಂತರಿಸಲು ಸರ್ಕಾರವು ಆದೇಶಿಸಿದೆ.

ಈ ಆದೇಶವನ್ನು ಕಂದಾಯ ಇಲಾಖೆಯ ಟಿಪ್ಪಣಿ ಸಂಖ್ಯೆ : ಆರ್‌ಡಿ 78 ಎಲ್‌ಜಿಡಿ 2014, ದಿನಾಂಕ : 10–12–2014ರ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 32**

**ಎಂ.ಬಿ. ವಿಜಯಕುಮಾರ**
ಸರ್ಕಾರದ ಅಧೀನ ಕಾರ್ಯದರ್ಶಿ,
ತೋಟಗಾರಿಕೆ ಇಲಾಖೆ (ರೇಷ್ಮೆ).

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ತಿಪ್ಪಗೊಂಡನಹಳ್ಳಿ ಜಲಾನಯನ ಪ್ರದೇಶದ ಸಂರಕ್ಷಣೆ ಅಧ್ಯಯನದ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಅಧಿಸೂಚನೆ ಸಂಖ್ಯೆ : ಅಪಜೀ 215 ಇಎನ್‌ವಿ 2000, ದಿನಾಂಕ : 18–11–2003.
2. ಕಾನೂನು ಇಲಾಖೆಯು ಕಡತ ಸಂಖ್ಯೆ : ಲಾ 01 ಸಿಡಬ್ಲ್ಯೂಡಿ 2014ರಲ್ಲಿ ದಿನಾಂಕ : 25–06–2014 ರಂದು ನೀಡಿರುವ ಅಭಿಪ್ರಾಯ.
3. ನಗರಾಭಿವೃದ್ಧಿ ಇಲಾಖೆಯ ಅ.ಟಿ.ಸಂಖ್ಯೆ : ನಅಇ 181 ಎಂಎನ್‌ಐ 2013, ದಿನಾಂಕ : 19–07–2014.
4. ಸರ್ಕಾರದ ಆದೇಶ ಸಂಖ್ಯೆ : ಅಪಜೀ 1 ಇಎನ್‌ಜಿ 2011, ದಿನಾಂಕ : 24–07–2014.
5. ಮಾನ್ಯ ಕಾನೂನು, ಸಂಸದೀಯ ವ್ಯವಹಾರಗಳು, ಪಶುಸಂಗೋಪನೆ ಮತ್ತು ಮುಜರಾಯಿ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ : 12–08–2014ರಂದು ನಡೆದ ಸಭೆಯ ನಡವಳಿ.
6. ಸರ್ಕಾರದ ಪತ್ರ ಸಂಖ್ಯೆ : ಅಪಜೀ 96 ಇಎನ್‌ಜಿ 2014, ದಿನಾಂಕ : 23–10–2014.
7. ಪರಿಸರ ನಿರ್ವಹಣೆ ಮತ್ತು ನೀತಿ ಸಂಶೋಧನಾ ಸಂಸ್ಥೆ ರವರ ಪತ್ರ ಸಂಖ್ಯೆ : ಸಿಎಲ್‌ಸಿ/ಟಿಜೀಆರ್/ಸಿಆರ್–9/2014–15/785, ದಿನಾಂಕ : 6–11–2014.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಅಧಿಸೂಚನೆಯಲ್ಲಿ ಅರ್ಕಾವತಿ ಮತ್ತು ಕುಮುದ್ವತಿ ನದಿಗಳನ್ನು ರಕ್ಷಿಸಿ ಜಲಾಶಯದ ಒಳಹರಿವು ಹೆಚ್ಚಿಸುವ ದೃಷ್ಟಿಯಿಂದ ಪರಿಸರ (ನಿಯಂತ್ರಣ) ಕಾಯ್ದೆ, 1986ರ ಕಲಂ 5ರಡಿ ಆದೇಶ ಹೊರಡಿಸಲಾಗಿದೆ.

ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ : 38218ರಲ್ಲಿ ಮೇಲೆ ಓದಲಾದ (1)ರ ಅಧಿಸೂಚನೆಯ ಬಗ್ಗೆ ಸ್ಪಷ್ಟ ನಿಲುವು ತಿಳಿಸುವಂತೆ ಆದೇಶ ನೀಡಿದ ಹಿನ್ನೆಲೆಯಲ್ಲಿ ಕಾನೂನು ಇಲಾಖೆಯು ಮೇಲೆ ಓದಲಾದ (2)ರಲ್ಲಿ ಅಧಿಸೂಚನೆಯನ್ನು ಪುನರ್ ಪರಿಶೀಲಿಸುವ ಬಗ್ಗೆ ಅಭಿಪ್ರಾಯವನ್ನು ನೀಡಿತ್ತು.

ಅಡಿಷನಲ್ ಅಡ್ವೋಕೇಟ್ ಜನರಲ್ ಇವರು ದಿನಾಂಕ : 4–7–2014ರ ಪತ್ರದಲ್ಲಿ ಮಾನ್ಯ ಉಚ್ಚ ನ್ಯಾಯಾಲಯಕ್ಕೆ ಸಲ್ಲಿಸಿರುವ ಮಾಹಿತಿಯ ಹಿನ್ನೆಲೆಯಲ್ಲಿ ಮತ್ತು ಕಾನೂನು ಇಲಾಖೆಯ ಅಭಿಪ್ರಾಯದ ಮೇರೆಗೆ ನಗರಾಭಿವೃದ್ಧಿ ಇಲಾಖೆಯು ಮೇಲೆ (3)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ

ಸರ್ಕಾರದ ಅಧಿಸೂಚನೆ ಸಂಖ್ಯೆ : ಅಪಜೀ 215 ಇಎನ್‌ವಿ 2000, ದಿನಾಂಕ : 18–11–2003 ಅನ್ನು ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯು ಹಿಂಪಡೆಯುವಂತೆ ಹಾಗೂ ಈ ವಿಷಯ ಕುರಿತು ಸಂಪೂರ್ಣವಾಗಿ ಪುನರ್ ಪರಿಶೀಲಿಸಿ ಹೊಸದಾಗಿ ಅಧಿಸೂಚನೆ ಹೊರಡಿಸುವವರೆಗೂ ಯಾವುದೇ ಹೊಸ ಅನಧಿಕೃತ ಕಟ್ಟಡಗಳು ಹಾಗೂ ಕೃಷಿಯೇತರ ಚಟುವಟಿಕೆಗಳಿಗೆ ಮಂಜೂರಾತಿ ನೀಡದೇ ಇರಲು ಸಂಬಂಧಪಟ್ಟವರಿಗೆ ಸೂಚಿಸಬೇಕೆಂದು ಕೋರಿರುತ್ತಾರೆ.

ಅದರಂತೆ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯು ಮೇಲೆ ಓದಲಾದ (4)ರ ಆದೇಶದಲ್ಲಿ ಸರ್ಕಾರದ ಅಧಿಸೂಚನೆ ಸಂಖ್ಯೆ : ಅಪಜೀ 215 ಇಎನ್‌ವಿ 2000, ದಿನಾಂಕ : 18–11–2003 ಅನ್ನು ಹಿಂಪಡೆದು ಆದೇಶಿಸಲಾಗಿದೆ.

ಮೇಲೆ ಓದಲಾದ (5)ರ ಸಭೆಯಲ್ಲಿ ದಿನಾಂಕ : 18–11–2003ರ ಅಧಿಸೂಚನೆಯನ್ನು ಪುನರ್ ಪರಿಶೀಲಿಸಲು ಹಾಗೂ ಪ್ರಸ್ತುತ ಪರಿಸ್ಥಿತಿಯ ಬಗ್ಗೆ ಸಮಗ್ರವಾದ ಅಧ್ಯಯನವನ್ನು ಬೇರೆ ರಾಜ್ಯಗಳಲ್ಲಿ ನದಿ ಪಾತ್ರದ ಸಂರಕ್ಷಣೆಗಾಗಿ ಚಾಲ್ತಿಯಲ್ಲಿರುವ ಮಾನದಂಡಗಳನ್ನು ಅನುಸರಿಸಿ ಆಧ್ಯಯನ ವರದಿ ತಯಾರಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಅದೇ ರೀತಿ ಸದರಿ ಅಧ್ಯಯನ ಕಾರ್ಯವನ್ನು ಸರ್ಕಾರಿ ಸಂಸ್ಥೆಯಾದ ಪರಿಸರ ನಿರ್ವಹಣೆ ಮತ್ತು ನೀತಿ ಸಂಶೋಧನಾ ಸಂಸ್ಥೆ (EMPRI) ಸಂಸ್ಥೆಗೆ ವಹಿಸಲು ತೀರ್ಮಾನಿಸಲಾಯಿತು.

ಅದರಂತೆ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯು ಮೇಲೆ ಓದಲಾದ (6)ರ ಪತ್ರದಲ್ಲಿ ಎಂ.ಸಿ. ಸಂಸ್ಥೆಗೆ ದಿನಾಂಕ : 18–11–2003ರ ಅಧಿಸೂಚನೆಯನ್ನು ಪುನರ್ ಪರಿಶೀಲಿಸಲು ಹಾಗೂ ಪ್ರಸ್ತುತ ಪರಿಸ್ಥಿತಿಯ ಬಗ್ಗೆ ಸಮಗ್ರ ಅಧ್ಯಯನವನ್ನು ಬೇರೆ ರಾಜ್ಯಗಳಲ್ಲಿ ನದಿ ಪಾತ್ರದ ಸಂರಕ್ಷಣೆಗಾಗಿ ಚಾಲ್ತಿಯಲ್ಲಿರುವ ಮಾನದಂಡಗಳನ್ನು ಅನುಸರಿಸಿ ಅಧ್ಯಯನ ವರದಿಯನ್ನು ಕೈಗೊಳ್ಳಲು ಕ್ರಿಯಾ ಯೋಜನೆಯನ್ನು ತಯಾರಿಸಿ, ಈ ಅಧ್ಯಯನಕ್ಕೆ ತಗಲುವ ಹಣಕಾಸಿನ ಅಂದಾಜು ವೆಚ್ಚದ ಮಾಹಿತಿಯನ್ನು ಒಂದು ವಾರದೊಳಗಾಗಿ ಸರ್ಕಾರಕ್ಕೆ ಸಲ್ಲಿಸುವಂತೆ ಹಾಗೂ ಅಂತಿಮ ಅಧ್ಯಯನ ವರದಿಯನ್ನು ಸರ್ಕಾರದ ಅನುಮೋದನೆ ದೊರೆತ ಒಂದು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸುವಂತೆ ಕೋರಲಾಗಿತ್ತು.

ಅದರಂತೆ, ಪರಿಸರ ನಿರ್ವಹಣೆ ಮತ್ತು ನೀತಿ ಸಂಶೋಧನಾ ಸಂಸ್ಥೆ ಮೇಲೆ ಓದಲಾದ (7)ರಲ್ಲಿ ತಿಪ್ಪಗೊಂಡನಹಳ್ಳಿ ಜಲಾನಯನ ಪ್ರದೇಶದ ಸಂರಕ್ಷಣೆ ಅಧ್ಯಯನ ಪ್ರಸ್ತಾವನೆಯನ್ನು ಕಳುಹಿಸಿದ್ದು, ಸದರಿ ಅಧ್ಯಯನಕ್ಕೆ ಕನಿಷ್ಠ ಮೂರು ತಿಂಗಳು ಅವಧಿಯನ್ನು ಸರ್ಕಾರಕ್ಕೆ ಕೋರಿರುತ್ತಾರೆ. ಎಂಪ್ರಿ ಸಂಸ್ಥೆಯು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಅನುಮೋದನೆ ನೀಡಿರುತ್ತದೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಅಪಜೀ 96 ಇಎನ್‌ಜಿ 2014 (ಭಾ–2), ಬೆಂಗಳೂರು, ದಿನಾಂಕ : 02–12–2014.**

ಮೇಲೆ ವಿವರಿಸಲಾಗಿರುವ ಪ್ರಸ್ತಾವನೆಯ ಅಂಶಗಳ ಹಿನ್ನೆಲೆಯಲ್ಲಿ ತಿಪ್ಪಗೊಂಡನಹಳ್ಳಿ ಜಲಾನಯನ ಪ್ರದೇಶದ ರಕ್ಷಣೆ ಮತ್ತು ಸಂರಕ್ಷಣೆಗಾಗಿ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯು ಪರಿಸರ (ನಿಯಂತ್ರಣ) ಕಾಯ್ದೆ, 1986ರ ಕಲಂ 5ರಡಿ ಹೊರಡಿಸಿದ್ದ ಸರ್ಕಾರದ ಅಧಿಸೂಚನೆ ಸಂಖ್ಯೆ : ಅಪಜೀ 215 ಇಎನ್‌ವಿ 2000, ದಿನಾಂಕ : 18–11–2003ನ್ನು ISRO ಮತ್ತು Indian Resources Information & Management Technologyies (INRIMIT) ಸಂಸ್ಥೆಗಳು ಕೈಗೊಂಡಿದ್ದ ಅಧ್ಯಯನ ವರದಿಯನ್ನು ಆಧರಿಸಿ ಹೊರಡಿಸಲಾಗಿದ್ದು, ಸದರಿ ವರದಿಯನ್ನು ಸಹ ಪರಿಗಣಿಸಿ ಸದರಿ ಅಧಿಸೂಚನೆಯನ್ನು ಪುನರ್ ಪರಿಶೀಲಿಸಿ, ಪ್ರಸ್ತುತ ಪರಿಸ್ಥಿತಿಯ ಬಗ್ಗೆ ಸಮಗ್ರ ಅಧ್ಯಯನವನ್ನು ಬೇರೆ ರಾಜ್ಯಗಳಲ್ಲಿ ನದಿ ಪಾತ್ರದ ಸಂರಕ್ಷಣೆಗಾಗಿ ಚಾಲ್ತಿಯಲ್ಲಿರುವ ಮಾನದಂಡಗಳನ್ನು ಅನುಸರಿಸಿ ಅಧ್ಯಯನ ವರದಿಯನ್ನು ಕೈಗೊಳ್ಳಲು ಕ್ರಿಯಾ ಯೋಜನೆಗೆ **ಪರಿಸರ ನಿರ್ವಹಣೆ ಮತ್ತು ನೀತಿ ಸಂಶೋಧನಾ ಸಂಸ್ಥೆ (ಎಂಪ್ರಿ) ಗೆ ರೂ. 7.70 ಲಕ್ಷಗಳ ಅನುದಾನವನ್ನು** ಲೆಕ್ಕ ಶೀರ್ಷಿಕೆ 3435–03–003–0–01, ಪರಿಸರ ಸಂಶೋಧನಾ ಶಿಕ್ಷಣ ಮತ್ತು ನವವಿಧಾನಾತ್ಮಕ ಯೋಜನೆಯಡಿಯಲ್ಲಿ ಬಿಡುಗಡೆಗೊಳಿಸಿ ಆದೇಶಿಸಲಾಗಿದೆ. **ಅಧ್ಯಯನ ವರದಿಯನ್ನು ಮೂರು ತಿಂಗಳ ಒಳಗಾಗಿ** ಸರ್ಕಾರಕ್ಕೆ ಸಲ್ಲಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಕುಮಾರಸ್ವಾಮಿ,**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
(ಪರಿಸರ ಮತ್ತು ಜೀವಿಶಾಸ್ತ್ರ)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**P.R. 33**
**SC-200**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಎಸ್.ಟಿ.ಎ. ಖಾದ್ರಿ, ವೈದ್ಯರು ದರ್ಜೆ–1 (ಯುನಾನಿ) ಸರ್ಕಾರಿ ಆಯುರ್ವೇದ ವೈದ್ಯಕೀಯ ಕಾಲೇಜು ಮತ್ತು ಆಸ್ಪತ್ರೆ, ರಾಯಚೂರು ಇವರ ವಿರುದ್ಧ ಇಲಾಖಾ ವಿಚಾರಣೆ–ದಂಡನೆ ವಿಧಿಸುವ ಬಗ್ಗೆ ಆದೇಶ.

**ಓದಲಾಗಿದೆ :**

1. ಪತ್ರ ಸಂಖ್ಯೆ : ಆಯುಷ್ 06 ಸಿಬ್ಬಂದಿ–01/2012–13, ದಿನಾಂಕ : 31–1–2013.
2. ಸರ್ಕಾರಿ ಆದೇಶ ಸಂ. ಆಕುಕ 62 ಪಿಐಎಂ 2013, ದಿನಾಂಕ : 27–02–2013.
3. ಕಾರಣ ಕೇಳುವ ನೋಟೀಸ್ ಮತ್ತು ದೋಷಾರೋಪಣಾ ಪಟ್ಟಿ ಜಾರಿಗೊಳಿಸಿದ ದಿನಾಂಕ : 27–3–2013.
4. ಆರೋಪಿತ ಅಧಿಕಾರಿಗಳ ಹೇಳಿಕೆ ದಿನಾಂಕ : 20–08–2013.
5. ಸರ್ಕಾರಿ ಆದೇಶ ಸಂ : ಆಕುಕ 62 ಪಿಐಎಂ 2013, ದಿನಾಂಕ : 7–10–2013.
6. ವಿಚಾರಣಾಧಿಕಾರಿಗಳ ವರದಿ ದಿನಾಂಕ : 5–4–2014.
7. 2ನೇ ಕಾರಣ ಕೇಳುವ ನೋಟೀಸ್ ಜಾರಿಯಾದ ದಿನಾಂಕ : 5–5–2014.
8. ಆರೋಪಿತ ಅಧಿಕಾರಿಯವರ ಲಿಖಿತ ಹೇಳಿಕೆ ದಿನಾಂಕ : 21–5–2014.

ಪ್ರಸ್ತಾವನೆ :

ಡಾ॥ ಎಸ್.ಟಿ.ಎ. ಖಾದ್ರಿ, ವೈದ್ಯರು ದರ್ಜೆ-1 (ಯುನಾನಿ) ಸರ್ಕಾರಿ ಆಯುರ್ವೇದ ವೈದ್ಯಕೀಯ ಕಾಲೇಜು ಮತ್ತು ಆಸ್ಪತ್ರೆ, ರಾಯಚೂರು ಇವರನ್ನು ಆಯುಷ್ ನಿರ್ದೇಶನಾಲಯದ ಆದೇಶ ಸಂ : ಆಯುಷ್/ಮುಅಅ/ಸಾಅಸ 01/2012-13, ದಿನಾಂಕ : 25-5-2012ರಲ್ಲಿ ಸರ್ಕಾರಿ ಆಯುರ್ವೇದ ಮಹಾವಿದ್ಯಾಲಯದ ಮತ್ತು ಆಸ್ಪತ್ರೆ, ಮೈಸೂರು ಇಲ್ಲಿಗೆ ವರ್ಗಾಯಿಸಲಾಗಿದ್ದು, ಅದರನ್ವಯ ರಾಯಚೂರು ಜಿಲ್ಲಾ ಅಯುಷ್ ಅಧಿಕಾರಿಗಳು ದಿನಾಂಕ : 9-6-2012ರ ಅಪರಾಹ್ನ ಕರ್ತವ್ಯದಿಂದ ಬಿಡುಗಡೆಗೊಳಿಸಿದ್ದರೂ ವರ್ಗಾವಣೆಗೊಂಡ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗದ ಹಿನ್ನೆಲೆಯಲ್ಲಿ ದಿನಾಂಕ : 29-8-2012ರಲ್ಲಿ ನೆನಪೋಲೆ ಹೊರಡಿಸದರೂ ಕೂಡಾ ಯಾವುದೇ ಉತ್ತರ ನೀಡದೆ ಅನಧಿಕೃತ ಗೈರು ಹಾಜರಿಯೆಂದು ಮುಂದುವರಿದು, ವರ್ಗಾವಣೆ ಆದೇಶವನ್ನು ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಲ್ಲಿಸಿದ್ದು ನ್ಯಾಯಾಲಯವು ವರ್ಗಾವಣೆ ಆದೇಶಕ್ಕೆ ತಡೆಯಾಜ್ಞೆ ನೀಡದಿರುವುದರಿಂದ, ಮುಂದುವರಿದು, ಸದರಿ ವೈದ್ಯರು ದಿನಾಂಕ : 9-6-2012 ರಿಂದ ಸತತವಾಗಿ ಅನಧಿಕೃತ ಗೈರು ಹಾಜರಿಯಲ್ಲಿ ಮುಂದುವರಿದ ಕಾರಣ ಮೇಲೆ ಓದಲಾದ (1)ರ ಆಯುಷ್ ನಿರ್ದೇಶಕರ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಮೇಲೆ ಓದಲಾದ (2)ರ ಸರ್ಕಾರಿ ಆದೇಶದ ಸಂ. ಆಕುಕ 62 ಪಿಐಎಂ 2013, ದಿನಾಂಕ : 27-2-2013ರಲ್ಲಿ ಇಲಾಖಾ ವಿಚಾರಣೆ ಬಾಕಿಯಿರಿಸಿ ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿ 1957ರ ನಿಯಮ 11ರಡಿ ಡಾ॥ ಎಸ್.ಟಿ.ಎ. ಖಾದ್ರಿ, ವೈದ್ಯರು ದರ್ಜೆ-1 (ಯುನಾನಿ) ಇವರ ಅನಧಿಕೃತ ಗೈರು ಹಾಜರಿ ಸಂಬಂಧ ಶಿಸ್ತುಕ್ರಮ ಜರುಗಿಸುವ ಮೂಲಕ ಇಲಾಖಾ ವಿಚಾರಣೆ ಪ್ರಾರಂಭಿಸಲು ಮೇಲೆ ಓದಲಾದ (3)ರ ಕಾರಣ ಕೇಳುವ ನೋಟೀಸ್ ಮತ್ತು ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಲಾಗಿದೆ. ಮೇಲೆ ಓದಲಾದ (4)ರನ್ವಯ ಸಲ್ಲಿಸಿದ ಲಿಖಿತ ಹೇಳಿಕೆಯಲ್ಲಿ ನಿರ್ದೇಶಕರು, ಆಯುಷ್ ಇಲಾಖೆ ಇವರು ಸಮೂಹ-ಎ ವೃಂದದ ಹುದ್ದೆಯ ವರ್ಗಾವಣೆ/ನೇಮಕಾತಿ ಪ್ರಾಧಿಕಾರವಾಗಿಲ್ಲದಿದ್ದರೂ ಅಮಾನತ್ತಿನಲ್ಲಿಡಲು ಸರ್ಕಾರದಿಂದ ಪ್ರಾಧಿಕೃತನಾಗಿರುವ ಅಧಿಕಾರಿಯಾಗಿರುವುದಿಲ್ಲವೆಂದು ತಿಳಿಸುತ್ತಾ ತನ್ನನ್ನು ಮೈಸೂರಿಗೆ ವರ್ಗಾಯಿಸಿರುವ ಕ್ರಮ ಅಸಿಂಧುವೆಂದು, ತನ್ನ ವಿರುದ್ಧ ಹೂಡಲಾದ ಎಲ್ಲಾ ಆರೋಪಗಳನ್ನು ಕಡೆಗಣಿಸುವುದಾಗಿಯೂ ಹಾಗೂ ನಿರ್ದೇಶಕರ ಆದೇಶವನ್ನು "ಶೂನ್ಯ" ವೆಂದು ಘೋಷಿಸಿ, ತನ್ನ ವಿರುದ್ಧ ಯಾವುದೇ ಕ್ರಮ ತೆಗೆದುಕೊಳ್ಳುವುದು ಉದ್ಭವಿಸುವುದಿಲ್ಲವೆಂದು, ತನ್ನ ವಿರುದ್ಧ ಮಾಡಲಾದ ಆರೋಪಗಳಿಂದ ಮುಕ್ತಗೊಳಿಸುವಂತೆ ಕೋರಿದ್ದಾರೆ.

ಮೇಲೆ ಓದಲಾದ (5)ರ ಸರ್ಕಾರಿ ಆದೇಶದಲ್ಲಿ ಡಾ॥ ಎಸ್.ಟಿ.ಎ. ಖಾದ್ರಿ, ವೈದ್ಯರು ದರ್ಜೆ-1 (ಯುನಾನಿ) ಇವರ ಸಮಜಾಯಿಷಿಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಸಮಂಜಸವಾಗಿಲ್ಲದ ಕಾರಣ ಸತ್ಯಾಸತ್ಯತೆ ಅರಿಯಲು ಇಲಾಖಾ ವಿಚಾರಣೆ ಮುಂದುವರಿಸುವುದು ಸೂಕ್ತವೆಂದು ನಿರ್ಧರಿಸಿ, ಕ.ನಾ.ಸೇ. (ಸಿ.ಸಿ.ಎ) ನಿಯಮಾವಳಿ 1957ರ ನಿಯಮ 11(2)ರಡಿ ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ಮತ್ತು ಇದೇ ನಿಯಮಾವಳಿ ನಿಯಮ 11(5)(ಸಿ) ಪ್ರಕಾರ ಆಡಳಿತಾಧಿಕಾರಿಯನ್ನು ಮಂಡನಾಧಿಕಾರಿಯಾಗಿ ನೇಮಿಸಲಾಗಿತ್ತು. ವಿಚಾರಣಾಧಿಕಾರಿಗಳು ದಿನಾಂಕ : 5-4-2014ರಂದು ಸಲ್ಲಿಸಿದ ಅಂತಿಮ ಇಲಾಖಾ ವಿಚಾರಣಾ ವರದಿಯಲ್ಲಿ ಆರೋಪಿತರ ವಿರುದ್ಧದ ಆರೋಪಗಳು ಸಾಬೀತಾಗಿರುವುದಾಗಿ ದೃಢಪಡಿಸಿದ್ದಾರೆ. ಅದರಂತೆ ಆಪಾದಿತ ಸರ್ಕಾರಿ ನೌಕರರಿಗೆ ಮೇಲೆ ಓದಲಾದ (6)ರ ವಿಚಾರಣಾ ವರದಿಯನ್ನು 2ನೇ ಕಾರಣ ಕೇಳುವ ನೋಟೀಸ್ ರೂಪದಲ್ಲಿ ನಿಯಮಾನುಸಾರ ಜಾರಿಗೊಳಿಸಿ ಲಿಖಿತ ಹೇಳೀಕೆಯನ್ನು ಪಡೆಯಲಾಗಿದ್ದು, ಸದರಿಯವರ ರಕ್ಷಣಾ ಹೇಳಿಕೆಯಲ್ಲಿ ತನ್ನ ವಿರುದ್ಧದ ಆರೋಪಗಳನ್ನು ಸಮರ್ಥಿಸಲು ಯಾವುದೇ ಸಮಂಜಸ ಕಾರಣಗಳಿಲ್ಲದ ಕಾರಣ, ತನ್ನನ್ನು ಆರೋಪಗಳಿಂದ ಮುಕ್ತಗೊಳಿಸುವಂತೆ ಕೋರಿದ್ದಾರೆ.

ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಡಾ॥ ಎಸ್.ಟಿ.ಎ. ಖಾದ್ರಿ, ವೈದ್ಯರು ದರ್ಜೆ-1 (ಯುನಾನಿ) ಸರ್ಕಾರಿ ಆಯುರ್ವೇದ ವೈದ್ಯಕೀಯ ಕಾಲೇಜು ಮತ್ತು ಆಸ್ಪತ್ರೆ, ಮೈಸೂರು ಇವರು ಸರ್ಕಾರಿ ಸೇವೆಗೆ 04 ತಿಂಗಳ ಅವಧಿಗಿಂತ ಹೆಚ್ಚಿಗೆ ಅನಧಿಕೃತ ಗೈರು ಹಾಜರಿಯಲ್ಲಿ ಮುಂದುವರೆದಿರುವುದರ ವಿರುದ್ಧ ಕ.ನಾ.ಸೇ. ನಿಯಮಾವಳಿ 1958ರ ನಿಯಮ 108ರ ಮೇರೆಗೆ ಅಂತಹ ಸರ್ಕಾರಿ ನೌಕರರು ಸರ್ಕಾರಿ ಸೇವೆಯಲ್ಲಿ ಮುಂದುವರಿಯಲು ಅನರ್ಹರು ಎಂದು ಭಾವಿಸಿ ಕಡ್ಡಾಯ ನಿವೃತ್ತಿಗೊಳಿಸಲು ಅವಕಾಶವಿರುವುದರಿಂದ ಹಾಗೂ ವಿಚಾರಣಾ ವರದಿಯಲ್ಲಿ ಇವರ ವಿರುದ್ಧದ ಆರೋಪಗಳು ಸಾಬೀತಾಗಿರುವ ಹಿನ್ನೆಲೆಯನ್ನು ಮತ್ತು ಈ ಪ್ರಕರಣಕ್ಕೆ ಸರ್ಕಾರಿ ಅಧಿಸೂಚನೆ ಸಂ. ಡಿ.ಪಿಎಆರ್ 4 ಎಸ್‌ಸಿಸಿ 2002, ದಿನಾಂಕ : 16-9-2002ರನ್ವಯ ಲೋಕಸೇವಾ ಆಯೋಗದ ಸಹಮತಿ ಅಗತ್ಯವಿರುವುದಿಲ್ಲ ಮತ್ತು ಆರೋಪಿತರು ತನ್ನ ವಿರುದ್ಧದ ಆರೋಪಗಳಿಗೆ ಯಾವುದೇ ಕಾರಣ ನಮೂದಿಸದೆ ತಳ್ಳಿ ಹಾಕಿರುವುದು ಆಪಾದಿತರ ದುರ್ನಡತೆ ಬಿಂಬಿತವಾಗಿರುವುದು ದೃಢಪಟ್ಟಿರುವುದರಿಂದ ಈ ಕೆಳಗಿನಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 62 ಪಿಐಎಂ 2013, ಬೆಂಗಳೂರು, ದಿನಾಂಕ : 24-12-2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಡಾ॥ ಎಸ್.ಟಿ.ಎ. ಖಾದ್ರಿ, ವೈದ್ಯರು ದರ್ಜೆ-1 (ಯುನಾನಿ) ಸರ್ಕಾರಿ ಆಯುರ್ವೇದ ವೈದ್ಯಕೀಯ ಕಾಲೇಜು ಮತ್ತು ಆಸ್ಪತ್ರೆ, ಮೈಸೂರು ಇವರು ದಿನಾಂಕ : 10-6-2012 ರಿಂದ ದಿನಾಂಕ : 26-11-2013ರವರೆಗೆ (509 ದಿನಗಳು) ಮತ್ತು ದಿನಾಂಕ : 29-11-2013 ರಿಂದ ಈ ಆದೇಶ ಹೊರಡಿಸಿದ ದಿನಾಂಕದವರೆಗೆ ಸರ್ಕಾರಿ ಸೇವೆಗೆ ಅನಧಿಕೃತ ಗೈರು ಹಾಜರಿಯಲ್ಲಿ ಮುಂದುವರೆದಿರುವುದರಿಂದ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯನ್ನು ಅಂಗೀಕರಿಸಿ ಕ.ನಾ.ಸೇವ (ಸಿಸಿಎ) ನಿಯಮಾವಳಿ 1957ರ 8 (vi) ರನ್ವಯ ಈ ಕೂಡಲೇ ಜಾರಿಗೆ ಬರುವಂತೆ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆ ವಿಧಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 34**

**SC-100**

**ಬಿ. ಕಮಲಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾ.ವೈ.ಪ. ಮತ್ತು ಸಮನ್ವಯ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರದ ಸಚಿವಾಲಯದ ಕಂದಾಯ ಇಲಾಖೆಯ ಕಾನೂನು ಕೋಶದಲ್ಲಿ ಸೃಜಿಸಲಾಗಿರುವ ಕಾನೂನು ಅಧಿಕಾರಿಗಳ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 408 ಸಅಸೇ 2008, ದಿನಾಂಕ : 06-09-2008.
2. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 594 ಸಅಸೇ 2009, ದಿನಾಂಕ : 03-09-2009.
3. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 39 ಸಅಸೇ 2010, ದಿನಾಂಕ : 15-06-2011.
4. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 246 ಸಅಸೇ 2011, ದಿನಾಂಕ : 13-05-2011.
5. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 226 ಸಅಸೇ 2012, ದಿನಾಂಕ : 07-05-2012.
6. ಕಂದಾಯ ಇಲಾಖೆಯ ಕಡತ ಸಂಖ್ಯೆ : ಕಂಇ 78 ಭೂಸ್ವಾವ್ಯಾ 2014.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕಂದಾಯ ಇಲಾಖೆಯಲ್ಲಿ 3 ಕಾನೂನು ಅಧಿಕಾರಿಗಳ ಹುದ್ದೆಗಳನ್ನು ತಾತ್ಕಾಲಿಕವಾಗಿ ದಿನಾಂಕ : 05-08-2008 ರಿಂದ ಜಾರಿಗೆ ಬರುವಂತೆ 1 ವರ್ಷದ ಅವಧಿಗೆ ಸೃಜಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಮೇಲೆ ಕ್ರಮಸಮಖ್ಯೆ (1)ರಲ್ಲಿ ಸೃಜಿಸಲಾದ 3 ಕಾನೂನು ಅಧಿಕಾರಿ ಹುದ್ದೆಗಳ ಪೈಕಿ 2 ಕಾನೂನು ಅಧಿಕಾರಿಗಳ ಹುದ್ದೆಗಳನ್ನು ದಿನಾಂಕ : 05-08-2009 ರಿಂದ 31-03-2010 ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ. ಅದೇ ರೀತಿ ಮೇಲೆ ಕ್ರಮ ಸಂಖ್ಯೆ (3) ಮತ್ತು (4)ರಲ್ಲಿ ಓದಲಾದ ಸರ್ಕಾರದ ಆದೇಶಗಳಲ್ಲಿ ದಿನಾಂಕ : 01-04-2010 ರಿಂದ 31-03-2011 ಹಾಗೂ ದಿನಾಂಕ : 01-04-2011 ರಿಂದ 31-03-2012 ರವರೆಗೆ ಸದರಿ ಹುದ್ದೆಗಳನ್ನು ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕಂದಾಯ ಇಲಾಖೆಯ ಕಾನೂನು ಕೋಶದಲ್ಲಿ ದಿನಾಂಕ : 31-03-2014 ರವರೆಗೆ ಮುಂದುವರೆಸಿರುವ 2 ಕಾನೂನು ಅಧಿಕಾರಿ ಹುದ್ದೆಗಳನ್ನು ಒಂದು ವರ್ಷದವರೆಗೆ ದಿನಾಂಕ : 01-04-2012 ರಿಂದ 31-03-2013 ರವರೆಗೆ ಮುಂದುವರೆಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (6)ರಲ್ಲಿ ಓದಲಾದ ಕಂದಾಯ ಇಲಾಖೆಯ ಕಡತದಲ್ಲಿ ಕಾನೂನು ಕೋಶದಲ್ಲಿನ 2 ಕಾನೂನು ಅಧಿಕಾರಿ ಹುದ್ದೆಗಳಿಗೆ ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಳ್ಳಲಾಗಿದ್ದು, ಶ್ರೀ ಎಸ್.ಎಸ್. ಕುಂಬಾರ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಮತ್ತು ಶ್ರೀ ಎ.ಹೆಚ್. ಅದಪ್ಪನವರ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರ ಗುತ್ತಿಗೆ ಅವಧಿಯು ದಿನಾಂಕ : 31-03-2013ಕ್ಕೆ ಮುಕ್ತಾಯವಾಗಿದ್ದು, ಶ್ರೀ ಎ.ಹೆಚ್. ಆದಪ್ಪನವರ್, ಇವರನ್ನು ದಿನಾಂಕ : 31-05-2012ರಂದು ಬಿಡುಗಡೆಗೊಳಿಸಿದ್ದು, ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಶ್ರೀ ಎಸ್.ಎಸ್. ಕುಂಬಾರ್, ಇವರ ಗುತ್ತಿಗೆ ಸೇವೆಯನ್ನು 2 ವರ್ಷಗಳ ಅವಧಿಗೆ ದಿನಾಂಕ : 01-04-2013 ರಿಂದ 2 ವರ್ಷಗಳ ಅವಧಿಗೆ ಮುಂದುವರಿಸಲು ಸದರಿ ಹುದ್ದೆಯನ್ನು ದಿನಾಂಕ : 01-04-2013 ರಿಂದ 31-03-2015 ರವರೆಗೆ ತಾತ್ಕಾಲಿಕವಾಗಿ ಮುಂದುವರಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 158 ಸಅಸೇ 2014, ಬೆಂಗಳೂರು, ದಿನಾಂಕ : 22ನೇ ಡಿಸೆಂಬರ್, 2014.**

ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯ ಕಾನೂನು ಕೋಶದಲ್ಲಿ ದಿನಾಂಕ : 31-03-2013 ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಲಾದ 2 ಕಾನೂನು ಅಧಿಕಾರಿ ಹುದ್ದೆಗಳಲ್ಲಿ ಶ್ರೀ ಎಸ್.ಎಸ್. ಕುಂಬಾರ್, ಕಾನೂನು ಅಧಿಕಾರಿ ಇವರ ಹುದ್ದೆಯನ್ನು ದಿನಾಂಕ : 01-04-2013 ರಿಂದ ದಿನಾಂಕ : 17-08-2013 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಘಟನೋತ್ತರ ಅನುಮೋದನೆ ನೀಡಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ : 10-07-1996ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 35**

**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-6).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿರುವ ಕಾವೇರಿ ಜಲವಿವಾದಕ್ಕೆ ಸಂಬಂಧಿಸಿದ ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ) ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 14 ಸಸಿವಿ 91, ದಿನಾಂಕ : 24-10-1991.
2. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 51 ಸಿಶಾಸೇ 92, ದಿನಾಂಕ : 26-03-1992.
3. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 80 ಸಅಸೇ 99, ದಿನಾಂಕ : 02-06-1999.
4. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 741 ಸಅಸೇ 2012, ದಿನಾಂಕ : 19-12-2012.
5. ಜಲಸಂಪನ್ಮೂಲ ಇಲಾಖೆಯ ಕಡತ ಸಂಖ್ಯೆ : ಜಸಂಇ/53/ಕಾವಿಇ/2014.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಅಂತರ ರಾಜ್ಯ ಕಾವೇರಿ ನದಿ ನೀರಿನ ಹಂಚಿಕೆಯ ವಿವರ ಕುರಿತು ಕೆಲಸ ಕಾರ್ಯಗಳನ್ನು ನಿರ್ವಹಿಸಲು ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿ ಒಂದು ಉಪ ಕಾರ್ಯದರ್ಶಿ (ತಾಂತ್ರಿಕ), ಜಲ ಸಂಪನ್ಮೂಲ ಹಾಗೂ ಒಂದು ಅಧೀನ ಕಾರ್ಯದರ್ಶಿ ಹುದ್ದೆಯನ್ನು 6 ತಿಂಗಳ ಅವಧಿಗೆ ಸೃಜಿಸಲಾಗಿದೆ ಮತ್ತು ಕಾಲಕಾಲಕ್ಕೆ ಮುಂದುವರೆಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಆದೇಶದಲ್ಲಿ ಜಲಸಂಪನ್ಮೂಲ ಇಲಾಖೆಯಲ್ಲಿ ಒಂದು ಉಪ ಕಾರ್ಯದರ್ಶಿ (ತಾಂತ್ರಿಕ), ಹಾಗೂ ಒಂದು ಅಧೀನ ಕಾರ್ಯದರ್ಶಿ (ತಾಂತ್ರಿಕ) ಹುದ್ದೆಗಳ ಅಧಿಕಾರಿಗಳ ಕಾರ್ಯನಿರ್ವಹಣೆಯ ಅನುಕೂಲ ಮತ್ತು ಸಹಾಯಕ್ಕಾಗಿ ಕೆಲವು ಹುದ್ದೆಗಳನ್ನು ಮುಖ್ಯ ಹುದ್ದೆಗಳು ಅಸ್ತಿತ್ವದಲ್ಲಿರುವವರೆಗೆ ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಆದೇಶದಲ್ಲಿ ಸರ್ಕಾರದ ಉಪ ಕಾರ್ಯದರ್ಶಿ (ತಾಂತ್ರಿಕ), ಹುದ್ದೆಯನ್ನು ನಿಷ್ಕ್ರಿಯಗೊಳಿಸಿ, ಸರ್ಕಾರದ ಅಧೀನ ಕಾರ್ಯದರ್ಶಿ (ತಾಂತ್ರಿಕ) ಹುದ್ದೆಯನ್ನು ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ) ಹುದ್ದೆಯೆಂದು ಉನ್ನತೀಕರಿಸಲಾಗಿದೆ ಮತ್ತು ವಿಶೇಷ ಕರ್ತವ್ಯಾಧಿಕಾರಿ ಹುದ್ದೆಯನ್ನು ಕಾಲಕಾಲಕ್ಕೆ ಮುಂದುವರೆಸಿಕೊಂಡು ಬರಲಾಗಿದೆ.

ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಆದೇಶದಲ್ಲಿ ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ), ಜಲಸಂಪನ್ಮೂಲ ಇಲಾಖೆ ಹುದ್ದೆಯನ್ನು ದಿನಾಂಕ : 01–01–2013 ರಿಂದ 31–12–2014ರವರೆಗೆ ಮುಂದುವರೆಸಲಾಗಿದೆ. ಈ ಹುದ್ದೆಯ ಅವಧಿಯು ದಿನಾಂಕ : 31–12–2014ಕ್ಕೆ ಮುಕ್ತಾಯಗೊಳ್ಳುವುದರಿಂದ ಜಲಸಂಪನ್ಮೂಲ ಇಲಾಖೆಯು ಕಾವೇರಿ ಜಲ ವಿವಾದ, ಕೃಷ್ಣಾ ಜಲ ವಿವಾದ ಹಾಗೂ ಮಹದಾಯಿ ಜಲ ವಿವಾದಗಳಂತಹ ಅಂತರ ರಾಜ್ಯ ವಿವಾದಕ್ಕೆ ಸಂಬಂಧಿಸಿದಂತಹ ಅತಿ ಮುಖ್ಯವಾದ ವಿಷಯಗಳನ್ನು ನಿರ್ವಹಿಸುತ್ತಿರುವ ಕಾರಣ, ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ), ಜಲ ಸಂಪನ್ಮೂಲ ಇಲಾಖೆ ಹುದ್ದೆಯನ್ನು ಇದಕ್ಕೆ ಹೊಂದಿಕೊಂಡಿರುವ ಹುದ್ದೆಗಳೊಂದಿಗೆ ದಿನಾಂಕ : 01–01–2015 ರಿಂದ 31–12–2016ರವರೆಗೆ ಮುಂದುವರೆಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 510 ಸಲುಸೇ 2014, ಬೆಂಗಳೂರು, ದಿನಾಂಕ : 22ನೇ ಡಿಸೆಂಬರ್, 2014.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿರುವ ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ) ಹುದ್ದೆಯನ್ನು ದಿನಾಂಕ : 01–01–2015 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ : 10–07–1996ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 36**

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–6).

## ಕಾನೂನು ಸಚಿವಾಲಯ

**ವಿಷಯ :** ಹೊನ್ನಾಳಿ ಕಂದಾಯ ತಾಲ್ಲೂಕು, ದಾವಣಗೆರೆ ಜಿಲ್ಲೆ ಇಲ್ಲಿಗೆ ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಪತ್ರ ಸಂಖ್ಯೆ : ಲಾ 69 ಎಲ್‌ಸಿಎಲ್ 2014, ದಿನಾಂಕ : 15–04–2014.
2. ಜಿಲ್ಲಾಧಿಕಾರಿಗಳ ಕಾರ್ಯಾಲಯ, ದಾವಣಗೆರೆ ಜಿಲ್ಲೆರವರ ಪತ್ರ ದಿನಾಂಕ : 31–07–2014.
3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ದಾವಣಗೆರೆ ಜಿಲ್ಲೆ ರವರ ಪತ್ರ ದಿನಾಂಕ : 09–09–2014.

**ಪ್ರಸ್ತಾವನೆ :**

ಸರ್ಕಾರವು ರಾಜ್ಯದ ಎಲ್ಲಾ ಕಂದಾಯ ತಾಲ್ಲೂಕುಗಳಿಗೆ ಒಂದೊಂದು ನೋಟರಿ ಹುದ್ದೆಯನ್ನು ಸೃಜಿಸಲು ತೀರ್ಮಾನಿಸಿದ್ದು, ಅದರಂತೆ, ಮೇಲೆ ಓದಲಾದ (1)ರ ದಿನಾಂಕ : 15–04–2014ರ ಪತ್ರದಲ್ಲಿ ದಾವಣಗೆರೆ ಜಿಲ್ಲೆಯ ಹೊನ್ನಾಳಿ ಕಂದಾಯ ತಾಲ್ಲೂಕಿನಲ್ಲಿ ಹಾಲಿ ಕೆಲಸ ನಿರ್ವಹಿಸುತ್ತಿರುವ 03 ನೋಟರಿಗಳಿಗೆ ಹೆಚ್ಚಿನ ಕೆಲಸದ ಒತ್ತಡವಿರುವ ಬಗ್ಗೆ ಹಾಗೂ ಇನ್ನೂ ಹೆಚ್ಚುವರಿ ಹುದ್ದೆಗಳನ್ನು ಸೃಜಿಸುವ ಅವಶ್ಯಕತೆ ಇದೆಯೇ ಎಂಬ ಬಗ್ಗೆ ಸಮರ್ಥನೀಯ ವಿವರಣೆಯನ್ನು ಒದಗಿಸುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ದಾವಣಗೆರೆ ಜಿಲ್ಲೆ ಮತ್ತು ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ ಇವರುಗಳನ್ನು ಕೋರಲಾಗಿತ್ತು.

ಅದರಂತೆ, ತಹಶೀಲ್ದಾರ್ ಕಛೇರಿ, ಹೊನ್ನಾಳಿ ಮತ್ತು ನ್ಯಾಯಾವಾದಿಗಳ ಸಂಘ, ಹೊನ್ನಾಳಿ, ದಾವಣಗೆರೆ ಜಿಲ್ಲೆ ಇವರುಗಳು ಹೊನ್ನಾಳಿ ಕಂದಾಯ ತಾಲ್ಲೂಕಿನಲ್ಲಿ ಸಾಕಷ್ಟು ವಿದ್ಯಾವಂತರಿದ್ದು, ಉದ್ಯೋಗಾವಕಾಶಗಳಿಗೆ ಮತ್ತು ಇತರೇ ಸೌಲಭ್ಯಗಳಿಗೆ ಪ್ರಮಾಣ ಪತ್ರ, ದಾಖಲೆಗಳ ಅಟೆಸ್ಟೇಷನ್, ಇತ್ಯಾದಿಗಳ ಅವಶ್ಯಕತೆ ಇರುವುದರಿಂದ, ಅಲ್ಲದೇ ರೈತರು, ವಿಕಲ ಚೇತನರು ಮತ್ತು ಸಾಮಾನ್ಯ ಜನರ ಪರವಾಗಿ ಸಾಕಷ್ಟು ಸರ್ಕಾರಿ ಸವಲತ್ತುಗಳನ್ನು ನೀಡಲಾಗುತ್ತಿರುವುದರಿಂದ, ಅವುಗಳನ್ನು ಪಡೆಯಲು ಬೇಕಾದ ನೋಟರೀಕೃತ ದಾಖಲೆಗಳ ಅವಶ್ಯಕತೆ ಇದ್ದು, ಈಗಿರುವ ನೋಟರಿಗಳು ಸಾಕಾಗದೇ ಇರುವ ಕಾರಣ ಇನ್ನೂ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವ ಅವಶ್ಯಕತೆ ಇದೆ ಎಂದು ಅಭಿಪ್ರಾಯ ನೀಡಿರುತ್ತಾರೆಂದು, ಮೇಲೆ (2)ರಲ್ಲಿ ಓದಲಾದ

ದಿನಾಂಕ : 31–07–2014ರ ಪತ್ರದೊಂದಿಗೆ ಅಪರ ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ ಇವರು, ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ದಾವಣಗೆರೆ ಜಿಲ್ಲೆಯ ಹೊನ್ನಾಳಿ ಕಂದಾಯ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವಂತೆ ಕೋರಿರುತ್ತಾರೆ.

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ದಾವಣಗೆರೆ ಜಿಲ್ಲೆ ಇವರು ರಾಜ್ಯ ಸರ್ಕಾರದಿಂದ ನೇಮಕಗೊಂಡ 03 ನೋಟರಿಗಳಿದ್ದು, ಸದರಿ ತಾಲ್ಲೂಕಿನಲ್ಲಿ ಹಾಲಿ ಇರುವ ನೋಟರಿಗಳ ಸಂಖ್ಯೆಯ ಮತ್ತು ಜನಸಂಖ್ಯೆಯ ಅನುಪಾತದ ಆಧಾರದ ಮೇಲೆ ಹೋಲಿಸಿದರೆ, ನೋಟರಿಗಳಿಗೆ ಹೆಚ್ಚಿನ ಕೆಲಸದ ಒತ್ತಡವಿರುವುದರಿಂದ, ದಾವಣಗೆರೆ ಜಿಲ್ಲೆಯ ಹೊನ್ನಾಳಿ ಕಂದಾಯ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆ ಸೃಜಿಸುವ ಅವಶ್ಯಕತೆ ಇದೆ ಎಂದು ವರದಿಯನ್ನು ನೀಡಿರುತ್ತಾರೆ.

ಮೇಲಿನ ವರದಿಗಳನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಲಾ 69 ಎಲ್‌ಸಿಎಲ್ 2014, ಬೆಂಗಳೂರು, ದಿನಾಂಕ : 23–12–2014.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ದಾವಣಗೆರೆ ಜಿಲ್ಲೆಯ ಹೊನ್ನಾಳಿ ಕಂದಾಯ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 39**

**SC 25**

**ಜಿ. ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾನೂನು ಇಲಾಖೆ, (ಆಡಳಿತ–2).

## ಕಂದಾಯ ಸಚಿವಾಲಯ

**ವಿಷಯ :** ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ತುಮಕೂರು ಗ್ರಾಮದ ಸ.ನಂ. 32ರಲ್ಲಿ 400 x 250 ಅಡಿಗಳ ವಿಸ್ತೀರ್ಣದ ಜಾಗವನ್ನು ಶ್ರೀ ಸಿದ್ಧಗಂಗಾ ಮಠ, ತುಮಕೂರು ಇವರಿಗೆ ಶೈಕ್ಷಣಿಕ ಮತ್ತು ವೈದ್ಯಕೀಯ ಸಂಶೋಧನಾ ಸಂಸ್ಥೆ ಕಟ್ಟಡ ನಿರ್ಮಾಣದ ಉದ್ದೇಶಕ್ಕಾಗಿ ಅನುಮತಿ ನೀಡುವ ಬಗ್ಗೆ

**ಓದಲಾಗಿದೆ :**
1) ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಇವರ ಪತ್ರ ಸಂಖ್ಯೆ: ಎಲ್‌ಎನ್‌ಡಿ.ಸಿಆರ್.18/2011–12, ದಿನಾಂಕ: 21–05–2014
2) ಸರ್ಕಾರದ ಆದೇಶ ಸಂಖ್ಯೆ: ಎಲ್.16522.27/ಎಂಎಲ್. 95–52–29, ದಿನಾಂಕ: 27–12–1952
3) ಸರ್ಕಾರದ ಆದೇಶ ಸಂಖ್ಯೆ: ವನಇ 180 ಟಿಟಿಪಿ 93, ದಿನಾಂಕ: 13–02–1996

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ, ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಇವರು ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಕಸಬಾ ಹೋಬಳಿ, ತುಮಕೂರು ಗ್ರಾಮದ ಸ.ನಂ. 32ರಲ್ಲಿ 640 x 370 ಅಡಿ ವಿಸ್ತೀರ್ಣದ ಜಮೀನನ್ನು ಶ್ರೀ ಸಿದ್ಧಗಂಗಾ ಮಠ ನಡೆಸುತ್ತಿರುವ ಸಿದ್ಧಗಂಗಾ ಪ್ರೌಢಶಾಲೆಯ ವಿದ್ಯಾರ್ಥಿಗಳ ಆಟದ ಮೈದಾನಕ್ಕೆಂದು ಮಂಜೂರು ಮಾಡಲಾದ ಜಮೀನಿನ ಪೈಕಿ 400 x 250 ಅಡಿ ವಿಸ್ತೀರ್ಣದ ಜಾಗವನ್ನು ಶೈಕ್ಷಣಿಕ, ವೈದ್ಯಕೀಯ ಮತ್ತು ಸಂಶೋಧನಾ ಸಂಸ್ಥೆ ಕಟ್ಟಡ ನಿರ್ಮಾಣದ ಉದ್ದೇಶಕ್ಕೆ ಉಪಯೋಗಿಸಿಕೊಳ್ಳಲು ಭೂ ಮಂಜೂರಾತಿ ಆದೇಶದಲ್ಲಿರುವ ಷರತ್ತು ಸಡಿಲಿಸಿ ಅನುಮತಿ ನೀಡುವ ಬಗ್ಗೆ ಪ್ರಸ್ತಾಪಿಸಿದ್ದಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (2)ರಲ್ಲಿ ಸರ್ಕಾರದ ಆದೇಶದಲ್ಲಿ ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಕಸಬಾ ಹೋಬಳಿ, ತುಮಕೂರು ಗ್ರಾಮದ ಸ.ನಂ. 32ರಲ್ಲಿ 640 x 370 ಅಡಿ ವಿಸ್ತೀರ್ಣದ ಜಾಗವನ್ನು ಶ್ರೀ ಸಿದ್ಧಗಂಗಾ ಪ್ರೌಢಶಾಲೆಯ ವಿದ್ಯಾರ್ಥಿಗಳ ಆಟದ ಮೈದಾನಕ್ಕೆಂದು ಉಚಿತವಾಗಿ ಹಾಗೂ ಭೂ ಪರಿವರ್ತನಾ ಶುಲ್ಕವನ್ನು ಮನ್ನಾ ಮಾಡಿ ಮಂಜೂರು ಮಾಡಲಾಗಿರುತ್ತದೆ.

ಮೇಲೆ ಓದಲಾದ ಕ್ರಮಸಂಖ್ಯೆ (3)ರ ನಗರಾಭಿವೃದ್ಧಿ ಇಲಾಖೆಯ ಆದೇಶದಲ್ಲಿ ತುಮಕೂರು ಗ್ರಾಮದ ಸ.ನಂ. 32ರಲ್ಲಿನ ನೈರುತ್ಯ ಮೂಲೆಯಲ್ಲಿ 400 x 250 ಅಡಿ ವಿಸ್ತೀರ್ಣವುಳ್ಳ ಜಮೀನನ್ನು ಆಟದ ಮೈದಾನದ ಉಪಯೋಗದಿಂದ ಸಾರ್ವಜನಿಕ ಉಪಯೋಗಕ್ಕಾಗಿ ಕಟ್ಟಡಗಳನ್ನು ಕಟ್ಟಲು ಭೂ ಬದಲಾವಣೆ ಮಾಡಲು ಕೆಳಕಂಡ ಷರತ್ತುಗಳೊಂದಿಗೆ ಒಪ್ಪಿಗೆ ನೀಡಲಾಗಿದೆ.

5) ಪ್ರಾಧಿಕಾರವು ಪರಿಷ್ಕರಿಸಿರುವ ಭೂ ಬದಲಾವಣೆ ಶುಲ್ಕವನ್ನು ಪಡೆಯತಕ್ಕದ್ದು.

6) ಸದರಿ ಜಮೀನಿನಲ್ಲಿ ಬಿ.ಹೆಚ್. ರಸ್ತೆಗೆ ಹೊಂದಿಕೊಂಡಿರುವ ಆಟದ ಮೈದಾನವನ್ನು ಉಳಿಸಿಕೊಳ್ಳತಕ್ಕದ್ದು.

7) ವ್ಯಾಪಕಾಭಿವೃದ್ಧಿ ಯೋಜನೆಯಲ್ಲಿ ಇದರಂತೆ ಸೂಕ್ತ ಬದಲಾವಣೆಯನ್ನು ಮಾಡಿಕೊಳ್ಳುವುದು ಎಂಬ ಷರತ್ತುಗಳಿಗೊಳಪಟ್ಟು ಒಪ್ಪಿಗೆ ನೀಡಿದೆ.

ಶ್ರೀ ಸಿದ್ಧಗಂಗಾ ಮಠ, ತುಮಕೂರು ಇಲ್ಲಿಗೆ ರಾಜ್ಯದ ನಾನಾ ಭಾಗಗಳಿಂದ ಹಾಗೂ ನೆರೆರಾಜ್ಯದ ಗಡಿ ಜಿಲ್ಲೆಗಳ ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಹಿಂದುಳಿದ ಮತ್ತು ತೀರಾ ಬಡವರಾದ, ಅನಾಥರಾದ ಸುಮಾರು 9,000ಕ್ಕೂ ಹೆಚ್ಚು ಮಕ್ಕಳು ವಿದ್ಯಾಭ್ಯಾಸ ಮಾಡುತ್ತಿದ್ದು, ತುಮಕೂರು ನಗರದ ಸುತ್ತಮುತ್ತ ಗ್ರಾಮದ ಬಡ ಜನತೆಗೆ ಅನುಕೂಲವಾಗುವಂತೆ ಸುಸಜ್ಜಿತ ವೈದ್ಯಕೀಯ ಸಂಶೋಧನಾ ಸಂಸ್ಥೆ ಕಟ್ಟಡ ನಿರ್ಮಾಣ ಮಾಡುವ ಸಾರ್ವಜನಿಕ ಸೇವೆಯ ಉದ್ದೇಶ ಹೊಂದಿರುವುದಾಗಿ ಶ್ರೀ ಸಿದ್ಧಗಂಗಾ ಮಠದ ಅಧ್ಯಕ್ಷರು ತಿಳಿಸಿರುವುದನ್ನು ಜಿಲ್ಲಾಧಿಕಾರಿ, ತುಮಕೂರು ಇವರು ವರದಿ ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಶ್ರೀ ಸಿದ್ಧಗಂಗಾ ಮಠ, ತುಮಕೂರು ಇವರು ನಡೆಸುತ್ತಿರುವ ಶ್ರೀ ಸಿದ್ಧಗಂಗಾ ಪ್ರೌಢಶಾಲೆಯ ಆಟದ ಮೈದಾನದ ಉದ್ದೇಶಕ್ಕಾಗಿ ಮಂಜೂರಾಗಿರುವ 640 x 370 ಅಡಿ ವಿಸ್ತೀರ್ಣದ ಜಮೀನಿನ ಪೈಕಿ 400 x 250 ಅಡಿ ವಿಸ್ತೀರ್ಣವುಳ್ಳ ಜಮೀನಿನಲ್ಲಿ ಶೈಕ್ಷಣಿಕ ಹಾಗೂ ವೈದ್ಯಕೀಯ ಸಂಶೋಧನಾ ಸಂಸ್ಥೆ ಕಟ್ಟಡ ನಿರ್ಮಾಣದ ಉದ್ದೇಶಕ್ಕಾಗಿ ಅನುಮತಿ ನೀಡುವ ಕುರಿತು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 64 ಎಲ್‌ಜಿಟಿ 2013, ಬೆಂಗಳೂರು, ದಿನಾಂಕ: 09ನೇ ಜನವರಿ, 2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಸಿದ್ಧಗಂಗಾ ಮಠ, ತುಮಕೂರು, ಇವರು ನಡೆಸುತ್ತಿರುವ ಶ್ರೀ ಸಿದ್ಧಗಂಗಾ ಪ್ರೌಢಶಾಲೆಯ ಆಟದ ಮೈದಾನದ ಉದ್ದೇಶಕ್ಕಾಗಿ ಸರ್ಕಾರದ ಆದೇಶ ಸಂಖ್ಯೆ: ಎಲ್. 16522-27/ಎಂಎಲ್ 95-52-29, ದಿನಾಂಕ: 27-12-1952ರಲ್ಲಿ ಮಂಜೂರಾಗಿರುವ 640 x 370 ಅಡಿ ವಿಸ್ತೀರ್ಣದ ಜಮೀನಿನ ಪೈಕಿ 400 x 250 ಅಡಿ ವಿಸ್ತೀರ್ಣದ ಜಾಗವನ್ನು ಕರ್ನಾಟಕ ಭೂ ಮಂಜೂರಾತಿ ನಿಯಮಗಳು, 1969ರ ನಿಯಮ 27ರ ಅಧಿಕಾರದನ್ವಯ ಶೈಕ್ಷಣಿಕ ಹಾಗೂ ವೈದ್ಯಕೀಯ ಸಂಶೋಧನಾ ಸಂಸ್ಥೆ ಕಟ್ಟಡ ನಿರ್ಮಾಣದ ಉದ್ದೇಶಕ್ಕಾಗಿ ಕೆಳಕಂಡ ಷರತ್ತುಗಳೊಂದಿಗೆ ಅನುಮತಿ ನೀಡಿ ಆದೇಶಿಸಿದೆ.

**ಷರತ್ತುಗಳು :**

1. ಪ್ರಸ್ತಾಪಿತ ಜಮೀನನ್ನು ಯಾವ ಉದ್ದೇಶಕ್ಕಾಗಿ ಉಪಯೋಗಿಸಿಕೊಳ್ಳಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಉಪಯೋಗಿಸಿಕೊಳ್ಳತಕ್ಕದ್ದು.
2. ಸದರಿ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ನೋಡಿಕೊಳ್ಳತಕ್ಕದ್ದು.
3. ಪ್ರಸ್ತಾಪಿತ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು.
4. ಆಟದ ಮೈದಾನದ ಉದ್ದೇಶಕ್ಕಾಗಿ ಪುನಃ ಜಮೀನು ಕೋರಿ ಅರ್ಜಿ ಸಲ್ಲಿಸತಕ್ಕದ್ದಲ್ಲ.
5. ಭೂ ಬದಲಾವಣೆ ಮಾಡಲು ನಗರಾಭಿವೃದ್ಧಿ ಇಲಾಖೆಯು ಸಹಮತಿ ನೀಡಿರುವ ಆದೇಶ ಸಂಖ್ಯೆ : ನಅಇ 180 ಟಿಟಿಪಿ 93, ದಿನಾಂಕ: 13-02-1996ರಲ್ಲಿನ ಷರತ್ತುಗಳನ್ನು ಯಥಾವತ್ತಾಗಿ ಪಾಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಮಹಾಂತೇಗೌಡ ಎಸ್.ಎಲ್.**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಮಂಜೂರಾತಿ-3)

**P.R. 71**

**SC - 25**

## ಕಂದಾಯ ಸಚಿವಾಲಯ

**ವಿಷಯ :** ಪಹಣಿ ತಿದ್ದುಪಡಿ ಅಧಿಕಾರವನ್ನು ತಹಶೀಲ್ದಾರರಿಗೆ ಪ್ರತ್ಯಾಯೋಜಿಸುವ ಕುರಿತು

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ: ಕಂಇ 44 ಎಂಆರ್‌ಆರ್ 2014, ದಿನಾಂಕ: 28-05-2014

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಗಣಕೀಕೃತ ಪಹಣಿಗಳಲ್ಲಿರುವ ಲೋಪದೋಷಗಳನ್ನು ಸರಿಪಡಿಸಲು ರಾಜ್ಯಾದ್ಯಂತ ಕಂದಾಯ ಅದಾಲತ್ ಆಂದೋಲನವನ್ನು ಕೈಗೊಳ್ಳಲು ಆದೇಶಿಸಿದೆ. ಈ ಕುರಿತು ಸರ್ಕಾರವು ವಿವರವಾದ ಮಾರ್ಗಸೂಚಿಯನ್ನು ದಿನಾಂಕ: 25-07-2014ರಂದು ಹೊರಡಿಸಿದೆ.

ಪ್ರಸ್ತುತ ಪಹಣಿಗಳಲ್ಲಿರುವ ತಪ್ಪುಗಳನ್ನು 2 ವರ್ಗಗಳಾಗಿ ಈ ಕೆಳಗಿನಂತೆ ವಿಂಗಡಿಸಬಹುದು.

11) ಡಾಟಾ ಎಂಟ್ರಿಗೆ ಬಳಸಲಾದ ಕೈಬರಹದ ಪಹಣಿ ಮತ್ತು ಭೂಮಿ ಡಾಟಾಬೇಸ್‌ನಲ್ಲಿರುವ ಪಹಣಿಗಳನ್ನು ಹೋಲಿಸಿ ನೋಡಿದಾಗ ಕಂಡುಬರುವ ವ್ಯತ್ಯಾಸಗಳು

12) ಡಾಟಾ ಎಂಟ್ರಿಗೆ ಬಳಸಲಾದ ಕೈಬರಹದ ಪಹಣಿಯಲ್ಲಿ ಗಣಕೀಕರಣದ ಪೂರ್ವದಲ್ಲೇ ಇದ್ದ ಲೋಪದೋಷಗಳು ಅಂದರೆ :-

- ಮ್ಯುಟೇಷನ್ ಪ್ರಕಾರ ಪಹಣಿಯನ್ನು ಕಾಲೋಚಿತಗೊಳಿಸದಿರುವುದು.
- ಮ್ಯುಟೇಷನ್ ಪ್ರಕಾರ ಪಹಣಿಯನ್ನು ತಪ್ಪಾಗಿ ಕಾಲೋಚಿತಗೊಳಿಸಿರುವುದು.
- ಯಾವುದೇ ಮ್ಯುಟೇಷನ್ ಇಲ್ಲದೇ ಪಹಣಿಯಿಂದ ನಮೂದನ್ನು ತೆಗೆದು ಹಾಕಿರುವುದು/ಹೊಸ ನಮೂದು ಮಾಡಿರುವುದು.

ಗಣಕೀಕೃತ ಪಹಣಿಯಲ್ಲಿನ ತಪ್ಪುಗಳನ್ನು ಸರಿಪಡಿಸಲು ಸಹಾಯಕ ಆಯುಕ್ತರಿಗೆ ಅಧಿಕಾರವಿರುತ್ತದೆ. ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಪ್ರಕಾರ ಯಾವುದೇ ಮ್ಯುಟೇಷನ್ ಅನ್ನು ತಿದ್ದುಪಡಿ ಮಾಡುವ/ವಜಾ ಮಾಡುವ ಅಧಿಕಾರವು ಸಹಾಯಕ ಆಯುಕ್ತರಿಗೆ ಪ್ರದತ್ತವಾಗಿರುತ್ತದೆ.

2013-14ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಮಾನ್ಯ ಮುಖ್ಯಮಂತ್ರಿಗಳು ಪಹಣಿಗಳಲ್ಲಿರುವ ಲೋಪದೋಷಗಳನ್ನು 2014ರ ಅಂತ್ಯದೊಳಗೆ ಸರಿಪಡಿಸಲಾಗುವುದೆಂದು ಘೋಷಿಸಿರುತ್ತಾರೆ. ರಾಜ್ಯಾದ್ಯಂತ ಎಲ್ಲಾ ತಾಲ್ಲೂಕುಗಳ ಗ್ರಾಮ ಲೆಕ್ಕಾಧಿಕಾರಿ ವೃತ್ತ ಮಟ್ಟದಲ್ಲಿ ಕಂದಾಯ ಅದಾಲತ್ ಮುಖಾಂತರ ಪಹಣಿಗಳ ಲೋಪದೋಷಗಳನ್ನು ಸರಿಪಡಿಸುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ. ದಿನಾಂಕ: 13-10-2014ರಂದು ಮಾನ್ಯ ಮುಖ್ಯ ಮಂತ್ರಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಜಿಲ್ಲಾಧಿಕಾರಿಗಳು, ಜಿಲ್ಲೆಗಳಲ್ಲಿ ಗರಿಷ್ಠ 2-3 ಸಹಾಯಕ ಆಯುಕ್ತರ ಹುದ್ದೆಗಳಿದ್ದು ಎಲ್ಲಾ ತಾಲ್ಲೂಕಿನಲ್ಲಿ ಏಕ ಕಾಲದಲ್ಲಿ ಕಂದಾಯ ಅದಾಲತ್ ಅನ್ನು ನಡೆಸಲು ಸಾಧ್ಯವಾಗುವುದಿಲ್ಲವೆಂದು ಅಭಿಪ್ರಾಯ ಪಟ್ಟಿರುತ್ತಾರೆ. ಆದ್ದರಿಂದ, ಪಹಣಿಗಳಲ್ಲಿರುವ ತಪ್ಪುಗಳಿಂದ ರೈತರಿಗೆ ಆಗುತ್ತಿರುವ ತೊಂದರೆಯನ್ನು ತಪ್ಪಿಸಲು ಸಹಾಯಕ ಆಯುಕ್ತರ ಅಧಿಕಾರವನ್ನು ತಹಶೀಲ್ದಾರರಿಗೆ ಪ್ರತ್ಯಾಯೋಜಿಸಿದರೆ ಕಂದಾಯ ಅದಾಲತ್ ಅನ್ನು ಎಲ್ಲಾ

ತಾಲ್ಲೂಕುಗಳಲ್ಲಿ ಏಕ ಕಾಲಕ್ಕೆ ಪ್ರಾರಂಭಿಸಬಹುದು ಮತ್ತು ತ್ವರಿತಗತಿಯಲ್ಲಿ ತಿದ್ದುಪಡಿ ಕಾರ್ಯವನ್ನು ಪೂರ್ಣಗೊಳಿಸಲು ಸಾಧ್ಯವಾಗುತ್ತದೆ ಎಂದು ಸಭೆಯಲ್ಲಿ ತೀರ್ಮಾನಿಸಲಾಗಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 44 ಎಂಆರ್‌ಆರ್ 2014, ಬೆಂಗಳೂರು, ದಿನಾಂಕ: 25ನೇ ಅಕ್ಟೋಬರ್, 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಜ್ಯಾದ್ಯಂತ ಎಲ್ಲಾ ತಾಲ್ಲೂಕುಗಳ ಗ್ರಾಮ ಲೆಕ್ಕಾಧಿಕಾರಿ ವೃತ್ತ ಮಟ್ಟದಲ್ಲಿ ಈ ಕೆಳಕಂಡಂತೆ ಪಹಣಿಗಳ ಲೋಪದೋಷಗಳನ್ನು ಸರಿಪಡಿಸುವ ಕಾರ್ಯವು ತ್ವರಿತಗತಿಯಲ್ಲಿ ಪೂರ್ಣಗೊಳಿಸುವ ಸಲುವಾಗಿ ಅಧಿಕಾರವನ್ನು ಸಹಾಯಕ ಆಯುಕ್ತರಿಂದ ತಹಶೀಲ್ದಾರರಿಗೆ ದಿನಾಂಕ: 31–03–2015ರ ವರೆಗೆ ಮಾತ್ರ ಪ್ರತ್ಯಾಯೋಜಿಸಿ ಆದೇಶಿಸಿದೆ.

1) ಡಾಟಾ ಎಂಟ್ರಿಗೆ ಬಳಸಲಾದ ಕೈಬರಹದ ಪಹಣಿ ಮತ್ತು ಭೂಮಿ ಡಾಟಾಬೇಸ್‌ನಲ್ಲಿರುವ ಪಹಣಿಗಳನ್ನು ಹೋಲಿಸಿ ನೋಡಿದಾಗ ಕಂಡುಬರುವ ವ್ಯತ್ಯಾಸಗಳು

2) ಡಾಟಾ ಎಂಟ್ರಿಗೆ ಬಳಸಲಾದ ಕೈಬರಹದ ಪಹಣಿಯಲ್ಲಿ ಗಣಕೀಕರಣದ ಪೂರ್ವದಲ್ಲೇ ಇದ್ದ ಲೋಪದೋಷಗಳು ಅಂದರೆ :–

- ಮ್ಯುಟೇಷನ್ ಪ್ರಕಾರ ಪಹಣಿಯನ್ನು ಕಾಲೋಚಿತಗೊಳಿಸದಿರುವುದು.
- ಮ್ಯುಟೇಷನ್ ಪ್ರಕಾರ ಪಹಣಿಯನ್ನು ತಪ್ಪಾಗಿ ಕಾಲೋಚಿತಗೊಳಿಸಿರುವುದು.
- ಯಾವುದೇ ಮ್ಯುಟೇಷನ್ ಇಲ್ಲದೇ ಪಹಣಿಯಿಂದ ನಮೂದನ್ನು ತೆಗೆದು ಹಾಕಿರುವುದು/ಹೊಸ ನಮೂದು ಮಾಡಿರುವುದು

ಸರ್ಕಾರವು ನಾಗರೀಕರಿಗೆ ಉಂಟಾಗುವ ಅನಾನುಕೂಲವನ್ನು ಕಂದಾಯ ಅದಾಲತ್ ಮುಖಾಂತರ ತೊಡೆದು ಹಾಕುವುದಕ್ಕಾಗಿಯೇ ಉಪವಿಭಾಗಾಧಿಕಾರಿಗಳಿಗೆ ನೀಡಿದ್ದ ಅಧಿಕಾರವನ್ನು ತಹಶೀಲ್ದಾರರಿಗೆ ಪ್ರತ್ಯಾಯೋಜನೆ ಮಾಡಿರುವುದನ್ನು ತಹಶೀಲ್ದಾರರು ಸಮರ್ಥವಾಗಿ ಮತ್ತು ಕಾನೂನು ಬದ್ಧವಾಗಿ ಬಳಸಬೇಕೆಂದು ಸರ್ಕಾರ ಸ್ಪಷ್ಟಪಡಿಸುತ್ತದೆ. ಒಂದು ವೇಳೆ ತಹಶೀಲ್ದಾರರು ಮತ್ತು ಅವರ ಅಧೀನದ ಯಾವುದೇ ಸಿಬ್ಬಂದಿಯು ಪಹಣಿ ಸರಿಪಡಿಸುವ ಪ್ರಕ್ರಿಯೆಯಲ್ಲಿ ನಿಯಮ ಬಾಹಿರವಾದ ಮತ್ತು ಸರ್ಕಾರಿ ನೌಕರರಿಗೆ ತಕ್ಕದಲ್ಲದ ಮಾರ್ಗವನ್ನು ಅನುಸರಿಸುವುದಾಗಲಿ ಅಥವಾ ಮ್ಯುಟೇಷನ್ ಪ್ರಕ್ರಿಯೆ ಇಲ್ಲದೆ ಸ್ವಾಧೀನತೆ ಬದಲಾಯಿಸುವುದಕ್ಕೆ ಅಥವಾ ಕಾನೂನು ಸಮ್ಮತವಲ್ಲದ ಯಾವುದೇ ನಮೂದನ್ನು ಪಹಣಿ ಸರಿಪಡಿಸುವ ಅವಕಾಶದಲ್ಲಿ ಸೇರಿಸುವ ಅಥವಾ ತೆಗೆದುಹಾಕುವ ಕೆಲಸವನ್ನು ಮಾಡಬಾರದು ಮತ್ತು ಈ ಅವಧಿಯಲ್ಲಿ ಸರ್ಕಾರಿ ಜಮೀನುಗಳ ಸಂರಕ್ಷಣೆ ತಹಶೀಲ್ದಾರರ ಜವಾಬ್ದಾರಿಯಾಗಿರುತ್ತದೆಂದು ಎಚ್ಚರಿಸಿದೆ.

**ಪುರಸಭೆ/ನಗರಸಭೆ/ನಗರ ಪಾಲಿಕೆ ವ್ಯಾಪ್ತಿಯಡಿ ಬರುವ ಪಹಣಿಗಳ ತಿದ್ದುಪಡಿಯನ್ನು ಮಾಡಲು ಈ ಆದೇಶದಡಿ ತಹಶೀಲ್ದಾರರಿಗೆ ಅವಕಾಶವಿರುವುದಿಲ್ಲ.**

**ಸರ್ಕಾರಿ ಜಮೀನುಗಳಿಗೆ ಸಂಬಂಧಪಟ್ಟಂತೆ ಮ್ಯುಟೇಷನ್, ಕೈಬರಹ ಪಹಣಿ ಅಥವಾ ಮಂಜೂರಾಗಿದೆ ಎಂದು ಇತರೆ ದಾಖಲೆ ಆಧರಿಸಿ ಪಹಣಿ ಸೃಜಿಸಲು/ಇಂಡೀಕರಿಸಲು/ಕಾಲೋಚಿತಗೊಳಿಸಲು ಹಾಗೂ ಸರ್ಕಾರಿ ಸರ್ವೆ ನಂಬರ್‌ಗಳ ಪಹಣಿ ತಿದ್ದುಪಡಿ ಮಾಡಲು ಈ ಆದೇಶ ಅನ್ವಯಿಸುವುದಿಲ್ಲ.**

ಕಂದಾಯ ಅದಾಲತ್‌ನಲ್ಲಿ ಪಹಣಿ ತಿದ್ದುಪಡಿ ಆದೇಶ ಹೊರಡಿಸಿರುವುದನ್ನು ಭೂಮಿ ತಂತ್ರಾಂಶದಲ್ಲಿ ಕಂದಾಯ ಅದಾಲತ್ Option ಮೂಲಕ ತಿದ್ದುಪಡಿ ಆದೇಶವನ್ನು ಸ್ಕ್ಯಾನ್ ಮಾಡಿ ಕಾಲೋಚಿತಗೊಳಿಸುವುದನ್ನು ಕಡ್ಡಾಯವಾಗಿ ಪಾಲಿಸಬೇಕು.

**ಇಷ್ಟಾದರೂ ಸಹ ಅಕ್ರಮಗಳು ಉಂಟಾದಲ್ಲಿ ತಹಶೀಲ್ದಾರರು ಅಧಿಕಾರವನ್ನು ದುರುಪಯೋಗಪಡಿಸಿಕೊಂಡಲ್ಲಿ ಶಿಸ್ತುಕ್ರಮಕ್ಕೆ ಒಳಪಡಿಸುವುದಲ್ಲದೆ ಅಂತಹವರ ವಿರುದ್ಧ ಇಂಡಿಯನ್ ಪೀನಲ್ ಕೋಡ್ 1860 ಕಲಂ 409ರ ರೀತ್ಯಾ ಮತ್ತು ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 192–A ರೀತ್ಯಾ ಕ್ರಮ ಜರುಗಿಸಲಾಗುವುದು.**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

P.R. 72
SC 300

**ಎಂ. ತಿಪ್ಪೀರಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
(ಭೂಮಿ & ಯು.ಪಿ.ಓ.ಆರ್.) ಕಂದಾಯ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಆರ್ಥಿಕ ಇಲಾಖೆಯಲ್ಲಿ ಯೋಜನಾ ನಿರ್ದೇಶಕರು, (ಖಜಾನೆ–II) ಹುದ್ದೆಯನ್ನು ತಾತ್ಕಾಲಿಕವಾಗಿ ಮುಂದುವರೆಸುವ ಬಗ್ಗೆ

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 716 ಸಅಸೇ 2013, ದಿನಾಂಕ: 10–09–2013
2. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ, ಇವರ ಕಡತ ಸಂಖ್ಯೆ: ಪಿಆರ್‌ಎಸ್ ಖಜಾನೆ–II/4538/2014
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 357 ಸಉಸೇ 2014, ದಿನಾಂಕ: 11–12–2014
4. ಖಜಾನೆ ಇಲಾಖೆಯ ಕಡತ ಸಂಖ್ಯೆ: DOT/ADM3/KII–66/2014–15

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಆರ್ಥಿಕ ಇಲಾಖೆಯಲ್ಲಿ ಸರ್ಕಾರದ ಎಲ್ಲಾ ಇಲಾಖೆಗಳ ಆರ್ಥಿಕ ಚಟುವಟಿಕೆಗಳು ಒಳಗೊಂಡಂತೆ ಆರ್ಥಿಕ ನಿರ್ವಹಣಾ "ಖಜಾನೆ–II" ತಂತ್ರಾಂಶ ಅನುಷ್ಠಾನಕ್ಕಾಗಿ ಆರ್ಥಿಕ ಇಲಾಖೆಯಲ್ಲಿ ಯೋಜನಾ ನಿರ್ದೇಶಕರು (ಖಜಾನೆ–II) ಹುದ್ದೆಯನ್ನು ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ. ಹುದ್ದೆಯ ಅವಧಿಯು ದಿನಾಂಕ: 10–09–2014ಕ್ಕೆ ಮುಕ್ತಾಯಗೊಳ್ಳುವುದರಿಂದ

"ಖಜಾನೆ–II" ರ ಅನುಷ್ಠಾನಕ್ಕೆ ತಡೆಯಾಗಿರುವುದರಿಂದ ಮೇಲೆ ಕ್ರಮಸಂಖ್ಯೆ (2)ರಲ್ಲಿ ಓದಲಾದ ಕಡತದಲ್ಲಿ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ, ಇವರು (ಖಜಾನೆ–II), ಯೋಜನಾ ನಿರ್ದೇಶಕರ ಹುದ್ದೆಯನ್ನು ಮತ್ತೊಂದು ವರ್ಷದವರೆಗೆ ಮುಂದುವರೆಸುವಂತೆ ಕೋರಿದ್ದ ಹಿನ್ನೆಲೆಯಲ್ಲಿ ಮೇಲೆ ಕ್ರಮಸಂಖ್ಯೆ (3)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ದಿನಾಂಕ: 10–09–2014ರಿಂದ ಒಂದು ವರ್ಷದ ಅವಧಿಯವರೆಗೆ ಮುಂದುವರೆಸಲಾಗಿತ್ತು. ತದನಂತರ ಮೇಲೆ ಕ್ರಮಸಂಖ್ಯೆ (4)ರಲ್ಲಿ ಓದಲಾದ ಖಜಾನೆ ಇಲಾಖೆಯ ಕಡತದಲ್ಲಿ ಪ್ರಸ್ತಾಪಿತ ಯೋಜನಾ ನಿರ್ದೇಶಕರು, (ಖಜಾನೆ–II) ಹುದ್ದೆಯನ್ನು ದಿನಾಂಕ: 10–09–2014ರಿಂದ ಮೂರು ವರ್ಷಗಳವರೆಗೂ ಮುಂದುವರೆಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 04 ಸಲುಸೇ 2015, ಬೆಂಗಳೂರು, ದಿನಾಂಕ: 08ನೇ ಜನವರಿ, 2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆರ್ಥಿಕ ಇಲಾಖೆಯ ಯೋಜನಾ ನಿರ್ದೇಶಕರು (ಖಜಾನೆ–II) ಹುದ್ದೆಯನ್ನು ತಾತ್ಕಾಲಿಕವಾಗಿ ದಿನಾಂಕ: 10–09–2014ರಿಂದ ಮೂರು ವರ್ಷಗಳ ಅವಧಿಗೆ ಮುಂದುವರೆಸಲಾಗಿದೆ ಹಾಗೂ ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 357 ಸಲುಸೇ 2014, ದಿನಾಂಕ: 11–12–2014ನ್ನು ಹಿಂಪಡೆಯಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10–07–1996ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–6)

**P.R. 73**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಸಿದ್ರಾಮಪ್ಪ ಹೆಚ್. ತಳವಾರ್, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ, ಇವರ ವಿರುದ್ಧದ ಇಲಾಖಾ ವಿಚಾರಣೆ ಬಾಕಿಯಿರಿಸಿ, ಅಮಾನತ್ತನ್ನು ತೆರವುಗೊಳಿಸಿ ಸೇವೆಗೆ ಪುನರ್ ಸ್ಥಾಪಿಸುವ ಬಗ್ಗೆ

**ಓದಲಾಗಿದೆ :**
1. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕಡತ ಸಂಖ್ಯೆ: ಕಸಂವಾಪ್ರ 478 ಕಸಧ 2014 ಮತ್ತು ಕಸಂವಾಪ್ರ 343 ಕಸಧ 2014
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 8 ಸೇಇವಿ 2014, ದಿನಾಂಕ: 16–06–2014
3. ನೋಟೀಸ್ ಸಂಖ್ಯೆ: ಸಿಆಸುಇ 8 ಸೇಇವಿ 2014, ದಿನಾಂಕ: 24–12–2014

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿನ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕಡತಗಳಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಲ್ಲಿ ಅಧೀನ ಕಾರ್ಯದರ್ಶಿಯಾಗಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ಸಿದ್ರಾಮಪ್ಪ ಹೆಚ್. ತಳವಾರ್ ಇವರು ಎಸಗಿರುವ ಈ ಕೆಳಕಂಡ ಕರ್ತವ್ಯಲೋಪಗಳಿಗೆ ಸಂಬಂಧಿಸಿದಂತೆ ಸದರಿ ಅಧಿಕಾರಿಯ ವಿರುದ್ಧ ಶಿಸ್ತು ಕ್ರಮವನ್ನು ಬಾಕಿಯಿಟ್ಟು ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸುವಂತೆ ಕೋರಿದ್ದರು.

- ಪುತ್ತೂರಿನಲ್ಲಿರುವ ಡಾ॥ ಶಿವರಾಮ ಕಾರಂತರ ಬಾಲವನದಲ್ಲಿರುವ ಆರ್ಟ್ ಗ್ಯಾಲರಿಯ ಮೇಲ್ಭಾವಣಿ ಮತ್ತು ಕಾನ್ಫರೆನ್ಸ್ ಹಾಲ್ ನಿರ್ಮಾಣ ಕಾಮಗಾರಿಗೆ ಅನುದಾನ ಬಿಡುಗಡೆಗೊಳಿಸುವಂತೆ ಮಾನ್ಯ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವರು ಅನುಮೋದಿಸಿದ್ದರೂ ಸಹ ಅನುದಾನವನ್ನು ಬಿಡುಗಡೆಗೊಳಿಸದೆ ಪ್ರಸಕ್ತ ಸಾಲಿನಲ್ಲಿ ಅನುದಾನ ಇಲ್ಲದೇ ಇರುವುದರಿಂದ ವಿಲೇ ಮಾಡಬಹುದಾಗಿದೆ ಎಂದು ಮೇಲಧಿಕಾರಿಗಳ ಅನುಮೋದನೆಯನ್ನು ಪಡೆಯದೆಯೇ ಅಧೀನ ಕಾರ್ಯದರ್ಶಿ ಹಂತದಲ್ಲಿಯೇ ತೀರ್ಮಾನ ಕೈಗೊಂಡಿರುವುದು.
- ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಉಪಕಾರ್ಯದರ್ಶಿಯವರು ಕಡತ ಸಂಖ್ಯೆ: ಕಸಂವಾ 345 ಕಸಧ 2014ರಲ್ಲಿ ರಂಗ ಮನೆ, ಸಾಂಸ್ಕೃತಿಕ ಕಲಾ ಕೇಂದ್ರ, ಸುಳ್ಯ, ದಕ್ಷಿಣ ಕನ್ನಡ ಜಿಲ್ಲೆ ಸಂಸ್ಥೆಗೆ 2013–14ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ರೂ. 3.00 ಲಕ್ಷಗಳ ಧನ ಸಹಾಯವನ್ನು ನಿಗದಿಪಡಿಸಲಾಗಿದ್ದು, ಇದರಲ್ಲಿ ರೂ. 2.00 ಲಕ್ಷಗಳನ್ನು ಸರ್ಕಾರದ ಆದೇಶ ಸಂಖ್ಯೆ: ಕಸಂವಾ 345 ಕಸಧ 2014, ದಿನಾಂಕ: 11–03–2014ರಲ್ಲಿ ಬಿಡುಗಡೆ ಮಾಡಿದ್ದು, ಬಾಕಿ ಉಳಿದಿರುವ ರೂ. 1.00 ಲಕ್ಷಗಳನ್ನು ಸದರಿ ಸಂಸ್ಥೆಗೆ ಮಂಜೂರು ಮಾಡಿ ಘಟನೋತ್ತರ ಅನುಮೋದನೆಗಾಗಿ ಕಡತ ಸಲ್ಲಿಸುವಂತೆ ಮಾನ್ಯ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವರ ಆಪ್ತ ಕಾರ್ಯದರ್ಶಿಯವರು ದೂರವಾಣಿ ಮುಖೇನ ಸೂಚಿಸಿರುವುದರಿಂದ ಕಡತವನ್ನು ಅನುಮೋದನೆಗಾಗಿ ಮಂಡಿಸಿರುವುದಾಗಿ ಟಿಪ್ಪಣಿಯನ್ನು ಮಂಡಿಸಿದ್ದು, ಈ ಕಂಡಿಕೆಯನ್ನು ಇಲಾಖಾ ಪ್ರಧಾನ ಕಾರ್ಯದರ್ಶಿಯವರು ದಿನಾಂಕ: 24–03–2014ರಂದೇ ಅನುಮೋದಿಸಿದ್ದರೂ ಸಹ ಈ ಬಗ್ಗೆ ಸರ್ಕಾರಿ ಆದೇಶವನ್ನು ಹೊರಡಿಸದೆ ಲೆಕ್ಕ ಶೀರ್ಷಿಕೆಯಡಿ ಅನುದಾನ ಲಭ್ಯವಿದಲ್ಲದ ಕಾರಣ ವಿಲೇ ಇಡಬಹುದಾಗಿದೆ ಎಂಬ ತೀರ್ಮಾನವನ್ನು ಮೇಲಧಿಕಾರಿಗಳ ಗಮನಕ್ಕೆ ತರದೇ ಅಧೀನ ಕಾರ್ಯದರ್ಶಿ ಹಂತದಲ್ಲಿಯೇ ತೀರ್ಮಾನ ತೆಗೆದುಕೊಂಡಿರುವುದು.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



- ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ವಿವಿಧ ಸಂಘ ಸಂಸ್ಥೆಗಳಿಗೆ ಧನ ಸಹಾಯ ಮಂಜೂರಾತಿ ಮಾಡಿದ್ದ ಆದೇಶದಲ್ಲಿ ನಮೂದಿಸಲಾಗಿದ್ದ ಲೆಕ್ಕಶೀರ್ಷಿಕೆಯಲ್ಲಿ ಅನುದಾನ ಲಭ್ಯವಿಲ್ಲವೆಂಬ ಕಾರಣಕ್ಕಾಗಿ ಸದರಿ ಅನುದಾನವನ್ನು ಮತ್ತೊಂದು ಲೆಕ್ಕಶೀರ್ಷಿಕೆಯಲ್ಲಿ ಮಂಜೂರು ಮಾಡುವ ಬಗ್ಗೆ ಒಟ್ಟಾರೆ 22 ತಿದ್ದುಪಡಿ ಆದೇಶಗಳನ್ನು ಆರೋಪಿತ ಅಧಿಕಾರಿಯವರು ಹೊರಡಿಸಿದ್ದು, ಈ ತಿದ್ದುಪಡಿ ಆದೇಶಗಳನ್ನು ಹೊರಡಿಸುವಾಗ ಮೇಲಧಿಕಾರಿಗಳ ಅನುಮೋದನೆಯನ್ನು ಪಡೆಯದೆ ಹಾಗೂ ಕೆಲವು ಸಂದರ್ಭಗಳಲ್ಲಿ ಆಂತರಿಕ ಆರ್ಥಿಕ ಸಲಹೆಗಾರರು/ಆರ್ಥಿಕ ಇಲಾಖೆಯ ಅನುಮೋದನೆಯನ್ನು ಪಡೆಯಬೇಕಾಗಿತ್ತೇ ಎಂಬುದನ್ನು ಸಹ ಪರಿಶೀಲಿಸದೇ ತಮ್ಮ ಹಂತದಲ್ಲಿಯೇ ನೇರವಾಗಿ ತಿದ್ದುಪಡಿ ಆದೇಶವನ್ನು ಹೊರಡಿಸಿರುವ ಮೂಲಕ ಕರ್ತವ್ಯ ಲೋಪ ಎಸಗಿರುವುದು.

ಅದರಂತೆ ಪರಿಶೀಲಿಸಿ ಆರೋಪಿತ ಅಧಿಕಾರಿಯಾದ ಶ್ರೀ ಸಿದ್ರಾಮಪ್ಪ ಹೆಚ್. ತಳವಾರ್, ಸರ್ಕಾರದ ಅಧೀನ ಕಾರ್ಯದರ್ಶಿ ಇವರನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಸರ್ಕಾರದ ಆದೇಶದನ್ವಯ ಆರೋಪಿತ ಅಧಿಕಾರಿಯವರ ವಿರುದ್ಧದ ಶಿಸ್ತು ಕ್ರಮವನ್ನು ಬಾಕಿಯಿಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮಸಂಖ್ಯೆ (3)ರಲ್ಲಿ ಆರೋಪಿತ ಅಧಿಕಾರಿಯವರಿಗೆ ಕ.ನಾ.ಸೇ. (ಸಿ.ಸಿ.ಎ.) ನಿಯಮಾವಳಿಗಳು 1957ರ ನಿಯಮ 11ರಡಿ ನೋಟೀಸ್‌ನೊಂದಿಗೆ ದೋಷಾರೋಪಣಾ ಪಟ್ಟಿಯನ್ನು ಈಗಾಗಲೇ ಜಾರಿ ಮಾಡಲಾಗಿರುತ್ತದೆ.

ಶ್ರೀ ಸಿದ್ರಾಮಪ್ಪ ಹೆಚ್. ತಳವಾರ್, ಸರ್ಕಾರದ ಅಧೀನ ಕಾರ್ಯದರ್ಶಿ ಇವರನ್ನು ಅಮಾನತ್ತಿನಲ್ಲಿಟ್ಟು ಈಗಾಗಲೇ 6 ತಿಂಗಳು ಕಳೆದಿರುವುದರಿಂದ ನಿಯಮಾನುಸಾರ ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಬಾಕಿಯಿರಿಸಿ ಇವರ ಅಮಾನತ್ತನ್ನು ತೆರವುಗೊಳಿಸಿ ಸೇವೆಗೆ ಪುನರ್ ಸ್ಥಾಪಿಸುವ ಬಗ್ಗೆ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 8 ಸೇಇವಿ 2014, ಬೆಂಗಳೂರು, ದಿನಾಂಕ: 13ನೇ ಜನವರಿ, 2015**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(5)(ಸಿ)ದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಸಿದ್ರಾಮಪ್ಪ ಹೆಚ್. ತಳವಾರ್, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಇವರ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ತೆರವುಗೊಳಿಸಿ, ಸರ್ಕಾರಿ ಸೇವೆಗೆ ಪುನರ್ ಸ್ಥಾಪಿಸಿ ಆದೇಶಿಸಿದೆ.

ಶ್ರೀ ಸಿದ್ರಾಮಪ್ಪ ಹೆಚ್. ತಳವಾರ್, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಇವರನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ – ಶ್ರೀಮತಿ ಎನ್.ಆರ್. ಸೀತಮ್ಮ ಇವರ ವಯೋನಿವೃತ್ತಿಯಿಂದ ತೆರವಾದ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–6)

P.R. 74

## ಒಳಾಡಳಿತ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಒಇ 371 ಪಿಪಿಇ 2014, ಬೆಂಗಳೂರು, ದಿನಾಂಕ: 3ನೇ ಜನವರಿ, 2015**

ಸರ್ಕಾರದ ಆದೇಶ ಸಂಖ್ಯೆ : ಒಇ 135 ಪಿಪಿಇ 2013, ದಿನಾಂಕ: 17–10–2014ಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ಈ ಮುಂದಿನಂತೆ ತಿದ್ದುಪಡಿ/ಸೇರ್ಪಡೆ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

(ಅ) ಸದರಿ ಅನುಬಂಧದ 2ನೇ ಪುಟದಲ್ಲಿ ಕ್ರಮ ಸಂಖ್ಯೆ : 15ರ ಅಂಕಣ 2ರಲ್ಲಿ **"ಬಿಜಾಪುರ (ಚಿಕ್ಕೋಡಿಗೆ)"** ಎಂದಿರುವುದನ್ನು **"ಬೆಳಗಾವಿ (ಚಿಕ್ಕೋಡಿಗೆ)"** ಎಂದು ;

(ಆ) ಸದರಿ ಅನುಬಂಧದಲ್ಲಿ 3ನೇ ಪುಟದಲ್ಲಿ ಕ್ರಮ ಸಂಖ್ಯೆ: 25ರ ಅಂಕಣ 3ರಲ್ಲಿ ಶೀಘ್ರಲಿಪಿಗಾರರು ಎಂದಿರುವುದರ ನಂತರದಲ್ಲಿ **"ದಲಾಯತ್"** ಎಂದು ಸದರಿ ಅಂಕಣದ ಮುಂದಿನ 4ನೇ ಅಂಕಣದಲ್ಲಿ "01" ಎಂದು ಸೇರ್ಪಡೆ ಮಾಡಿಕೊಂಡು ; ಹಾಗೂ

(ಇ) ಸದರಿ ಅನುಬಂಧದ 8ನೇ ಪುಟದಲ್ಲಿ ಕ್ರಮ ಸಂಖ್ಯೆ : 54ರ ಅಂಕಣ 2ರಲ್ಲಿ **"ಕಾರವಾಡ"** ಎಂದಿರುವುದನ್ನು **"ಕಾರವಾರ"** ಎಂದು

ಉಳಿದಂತೆ ಸದರಿ ಸರ್ಕಾರಿ ಆದೇಶ ಸಂಖ್ಯೆ: ಒಇ 135 ಪಿಪಿಇ 2013, ದಿನಾಂಕ: 17–10–2014ರ ಆದೇಶದ ಭಾಗದಲ್ಲಾಗಲಿ ಅಥವಾ ಅನುಬಂಧದ ಭಾಗದಲ್ಲಾಗಲೀ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ದೇವೇಂದ್ರಪ್ಪ ಕಟ್ಟಿಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೋಲೀಸ್ ಸೇವೆಗಳು–ಬಿ)

P.R. 77

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59